# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಡಿಸೆಂಬರ್ ೨೫, ೨೦೧೪ (ಪುಷ್ಯ ೪, ಶಕ ವರ್ಷ ೧೯೩೬)<br>Bengaluru, Thursday, December 25, 2014 (Pushya 4, Shaka Varsha 1936) | ಸಂಚಿಕೆ ೫೧<br>Issue 51 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಪೊಲೀಸ್ ಇಲಾಖೆ**

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ/ಸಿಬಿ/20/ಡಿಸಿಪಿ/ಸಂ.ಪೂ/2014. ದಿನಾಂಕ: 06–11–2014**

ಬೆಂಗಳೂರು ನಗರ–ಸದಾಶಿವನಗರ ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಗೆ ಸೇರಿದ ಸದಾಶಿವನಗರ 18ನೇ ಅಡ್ಡರಸ್ತೆಯಲ್ಲಿ ಸಂಚಾರವು ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು, ಈ ರಸ್ತೆಯು ಕೇವಲ 17 ಅಡಿಗಳ ಅಗಲದಿಂದ ಕೂಡಿರುತ್ತದೆ. ಸದರಿ ರಸ್ತೆಯು ರಮಣಮಹರ್ಷಿ ರಸ್ತೆಗೆ ಸಮಾನಾಂತರವಾಗಿದ್ದು, ರಮಣಮಹರ್ಷಿ ರಸ್ತೆಯಲ್ಲಿ ವಾಹನಗಳ ದಟ್ಟಣೆ ಹೆಚ್ಚಾದಾಗ ಎಲ್ಲಾ ರೀತಿಯ ವಾಹನಗಳು ವಸತಿ ಪ್ರದೇಶವಾದ ಸದಾಶಿವನಗರ 18ನೇ ಅಡ್ಡರಸ್ತೆಯಲ್ಲಿ ಸಂಚರಿಸುವುದರಿಂದ ಸ್ಥಳೀಯ ನಿವಾಸಿಗಳಿಗೆ ಸಂಚಾರಕ್ಕೆ ತುಂಬಾ ತೊಂದರೆ ಉಂಟಾಗುತ್ತಿರುತ್ತದೆ. ಸದಾಶಿವನಗರ 18ನೇ ಅಡ್ಡರಸ್ತೆಯಲ್ಲಿ ವಾಸಿಸುವ ಸ್ಥಳೀಯ ನಿವಾಸಿಗಳಿಗೆ ಮತ್ತು ಇತರೆ ಸಾರ್ವಜನಿಕರಿಗೆ ಸುಗಮ ವಾಹನ ಸಂಚಾರ ವ್ಯವಸ್ಥೆ ಮಾಡಲು ಮತ್ತು ಸಾರ್ವಜನಿಕರ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು, ಸದಾಶಿವನಗರ 18ನೇ ಅಡ್ಡರಸ್ತೆಯಲ್ಲಿ ಈ ಕೆಳಕಂಡಂತೆ ಸಂಚಾರ ಮಾರ್ಪಾಡುಗಳನ್ನು ಮಾಡುವುದು ಅವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಐ.ಎಂ.ವಿ. ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರದ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಂ.ಎನ್. ರೆಡ್ಡಿ, ಐ.ಪಿ.ಎಸ್. ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. **ಸದಾಶಿವನಗರ 18ನೇ ಅಡ್ಡರಸ್ತೆಯಲ್ಲಿ, ದಕ್ಷಿಣದ ಕಾವೇರಿ ಎಲಿಮೆಂಟ್ ಕಡೆಯಿಂದ ಕಾರ್, ಆಟೋರಿಕ್ಷಾ ಮತ್ತು ದ್ವಿಚಕ್ರ ವಾಹನಗಳ ಸಂಚಾರವನ್ನು ಹೊರತುಪಡಿಸಿ ಉಳಿದ ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ನಿರ್ಬಂಧಿಸಿರುತ್ತೇನೆ.**
2. **ಸದಾಶಿವನಗರ 18ನೇ ಅಡ್ಡರಸ್ತೆಯಲ್ಲಿ, ಉತ್ತರದ 4ನೇ ಮುಖ್ಯರಸ್ತೆ ಜಂಕ್ಷನ್‌ನಿಂದ ದಕ್ಷಿಣದ ಕಾವೇರಿ ಎಲಿಮೆಂಟ್ ಕಡೆಗೆ ಸುಮಾರು 300 ಅಡಿಗಳ ದೂರದವರೆಗೆ ಎಲ್ಲಾ ಮಾದರಿಯ ವಾಹನಗಳ ಸಂಚಾರವನ್ನು ನಿಷೇಧಿಸಿರುತ್ತೇನೆ.**

ಅಂತೆಯೇ ಕಲಂ–116 ಐ.ಎಂ.ವಿ. ಕಾಯ್ದೆ 1988 ಹಾಗೂ ಕಲಂ 4 ಕೆ.ಟಿ.ಸಿ. ಆಕ್ಟ್ 1960 ರಲ್ಲಿ ನನ್ನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ವ್ಯವಸ್ಥೆಯನ್ನು ದಿನಾಂಕ: 06–11–2014ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 06–11–2014ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಂ.ಎನ್. ರೆಡ್ಡಿ ಐ.ಪಿ.ಎಸ್.,**
ಪೊಲೀಸ್ ಕಮೀಷನರ್, ಬೆಂಗಳೂರು ನಗರ

**P.R. 851**
**S.C. 10**

## GOVERNMENT OF KARNATAKA

## COMMERCIAL TAXES DEPARTMENT

**Office of the Commissioner of Commercial Taxes,**
**in Karnataka, "Vanijya Therige Karyalaya", Gandhinagar, Bangalore-560 009,**

### CORRIGENDUM

**NO.CLR.CR.26/2014-15, Dated: 07-11-2014.**

**Sub :** KVAT Act, 2003- Section 59 (4) read with the Section 60(8) - issue of clarification on rate of tax on 'All-in-one diapers of various sizes, 'Under-pads' and 'Sanitary Napkins'-reg.

**Ref :** Clarification order NO.CLR.CR.26/2014-15 Dated 11-09-2014.

In the clarification order cited above, it is clarified that "all-in-one diapers of various sizes, under-pads and sanitary napkins" are taxable at 14.5% under Section 4(1)(b)(iii) of the KVAT Act, 2003. But, rate of tax on "sanitary napkins" is at a lower rate with effect from 01-04-2008 in terms of the notification No.FD 507 CSL 2007(V) dated 24-03-2008. Hence, the operative part of the clarification dated 11-09-2014 shall be read as under:

**CLARIFICATION NO.CLR.CR.26/2014-05 DATED 11-09-2014**

In supersession of the clarification No. AR.CLR.CR.119/2006-07 dated: 30.03.2007 issued by the Authority for Clarification and Advance Rulings and in exercise of the powers vested in me under sub-section (8) of Section 60 of KVAT Act, 2003, it is clarified as under:

1) 'Ail-in-one diapers' of various sizes and 'Under-pads' are taxable at 14.5% under Section 4(1)(b)(iii) of the Karnataka Value Added Tax Act, 2003. This tax rate is applicable to **M/ s Bella Premier Happy Hygiene Care Private Limited, Bangalore** from the date of publication of this clarification order in the official Gazette as per the provisions of Section 60(8).

2) The rate of tax applicable to 'All-in-one diapers' of various SIzes, 'Under-pads' and 'Sanitary Napkins' in respect of all other dealers is as under for different periods:

**'All-in-one diapers' of various sizes and 'Under-pads'**

| Sl.No. | Period | Tax Rate |
|---|---|---|
| 1) | 01.04.2005 to 31.03.2010 | 12.5% |
| 2) | 01.04.2010 to 31.03.2011 | 13.5% |
| 3) | 01.04.2011 to 31.07.2012 | 14% |
| 4) | 01.08.2012 and onwards | 14.5% |

**'Sanitary Napkins'**

| Sl.No. | Period | Tax Rate | Notification No. & Date |
|---|---|---|---|
| 1) | 01.04.2005 to 31.03.2008 | 12.5% | -- -- -- -- |
| 2) | 01.04.2008 to 31.03.2010 | 4 % | FD 507 CSL 2007(V)/24-03-2008 |
| 3) | 01.04.2010 to 31.07.2012 | 5 % | FD 82 CSL 10(III)/31-03-2010 |
| 4) | 01.08.2012 and onwards | 5.5% | FD 143 CSL 12(I)/31-07-2012 |

**AJAY SETH,**
Commissioner of Commercial Taxes,
Karnataka, Bangalore.

**PR 852**
**SC 25**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ಅಧಿಸೂಚನೆ

**ನಂ. ಚು (4) ಸಿಆರ್ 068/14-15,ದಿನಾಂಕ: 12-11-2014**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ 1996ರ ಉಪಬಂಧಗಳ ಮತ್ತು ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು 1968ರ ನಿಯಮ 7ರ ಮೇರೆಗೆ ಈ ಕಾರ್ಯಾಲಯದ ಚುನಾವಣೆ ನೋಟೀಸು

ಕ್ರಮಾಂಕ ಚು(4), ಸಿಆರ್ 068/2014–15, ದಿನಾಂಕ: 13–10–2014ರಂತೆ ನಿಗಧಿಪಡಿಸಿದ ಚುನಾವಣಾ ವೇಳಾಪಟ್ಟಿ ಪ್ರಕಾರ ಹಾಗೂ ಕೃಷಿ ಮಾರಾಟ ನಿರ್ದೇಶಕರು, ಕೃಷಿ ಇಲಾಖೆ, ಬೆಂಗಳೂರುರವರ ಪತ್ರ ನಂ. ಕೃಮಾಇ/25/ಚುನಾವಣೆ/2011, ದಿನಾಂಕ: 10–09–2014ರ ಪತ್ರದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಭದ್ರಾವತಿಯಲ್ಲಿ ಕೃಷಿ ಸಹಕಾರ ಸಂಸ್ಕರಣ ಸಂಘ ಕ್ಷೇತ್ರದ ವತಿಯಿಂದ ತೆರವಾಗಿರುವ ಸದಸ್ಯ ಸ್ಥಾನಕ್ಕೆ ಉಪಚುನಾವಣೆಯ ವೇಳಾಪಟ್ಟಿಯನ್ನು ಹೊರಡಿಸಲಾಗಿದೆ. ಈ ಚುನಾವಣೆಗೆ ಒಂದೇ ನಾಮಪತ್ರ ಸ್ವೀಕರಿಸಲಾಗಿರುತ್ತದೆ. ಪ್ರಯುಕ್ತ ನಿಯಮ 14ರಂತೆ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ನಿಯಮಗಳು 1968ರ ಪ್ರಕಾರ ಸದರಿ ಚುನಾವಣೆಯ ಫಲಿತಾಂಶವನ್ನು ಸಂಬಂಧಿಸಿದ ಚುನಾವಣಾಧಿಕಾರಿಗಳು ಶ್ರೀ ಜಿ. ನಂದೀಶ್ ಬಿನ್ ಗುಡ್ಡದಮಲ್ಲಪ್ಪ ರವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಭದ್ರಾವತಿಯಲ್ಲಿ ಕೃಷಿ ಸಹಕಾರ ಸಂಸ್ಕರಣ ಸಂಘ ಕ್ಷೇತ್ರದ ಸದಸ್ಯ ಸ್ಥಾನಕ್ಕೆ ಚುನಾಯಿತರಾಗಿರುತ್ತಾರೆ ಎಂದು ಘೋಷಿಸಿರುತ್ತಾರೆ.

ಪ್ರಯುಕ್ತ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ 1996ರ ಕಲಂ 27ರ ಮೇರೆಗೆ ಶ್ರೀ ವಿ.ಪಿ. ಇಕ್ಕೇರಿ, ಜಿಲ್ಲಾಧಿಕಾರಿ, ಶಿವಮೊಗ್ಗ ಆದ ನಾನು ಕೃಷಿ ಮಾರುಕಟ್ಟೆ ಸಮಿತಿ, ಭದ್ರಾವತಿ ಕೃಷಿ ಸಹಕಾರ ಸಂಸ್ಕರಣ ಸಂಘ ಕ್ಷೇತ್ರದ ವತಿಯಿಂದ ತೆರವಾಗಿರುವ ಸದಸ್ಯ ಸ್ಥಾನಕ್ಕೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಗಿನಂತೆ ಪ್ರಕಟಿಸಿರುತ್ತೇನೆ.

**ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಹೆಸರು : ಭದ್ರಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ**

| ಕ್ರ.ಸಂ. | ಚುನಾವಣಾ ಕ್ಷೇತ್ರದ ಹೆಸರು | ಆಯ್ಕೆಯಾದ ಸದಸ್ಯರ ಹೆಸರು ಮತ್ತು ವಿಳಾಸ |
|---|---|---|
| 1 | ಭದ್ರಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಭದ್ರಾವತಿ ಕೃಷಿ ಸಹಕಾರ ಸಂಸ್ಕರಣ ಸಂಘ | ಶ್ರೀ ಜಿ. ನಂದೀಶ್ ಬಿನ್ ಗುಡ್ಡದಮಲ್ಲಪ್ಪ, ಆನವೇರಿ ವಾಸ ಮತ್ತು ಅಂಚೆ, ಭದ್ರಾವತಿ ತಾಲ್ಲೂಕು, ಭದ್ರಾವತಿ |

**P.R. 854**
**S.C. 25**

ವಿ.ಪಿ. ಇಕ್ಕೇರಿ,
ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 04 ಎಲ್‌ಆರ್‌ಎಂ 2013, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್, 2014**

**ಮೆ॥ ಸಿ.ಎಂ.ಆರ್. ಜ್ಞಾನದಾರ್ ಟ್ರಸ್ಟ್,** ಇವರಿಗೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ಚಾಗಲಟ್ಟಿ ಗ್ರಾಮದ ಸ.ನಂ. 93/1ರಲ್ಲಿ 3–00 ಎಕರೆ, ಸ.ನಂ. 93/2ರಲ್ಲಿ 0–38.08 ಗುಂಟೆ ಸ.ನಂ. 93/3 ರಲ್ಲಿ 0–38.08 ಗುಂಟೆ ಸ.ನಂ. 93/4ರಲ್ಲಿ 0–38.08 ಗುಂಟೆ ಸ.ನಂ. 93/5ರಲ್ಲಿ 0.38.08 ಗುಂಟೆ ಸ.ನಂ. 93/6ರಲ್ಲಿ 0–38.08 ಗುಂಟೆ ಸ.ನಂ. 93/7ರಲ್ಲಿ 7–01.08 ಎ/ಗುಂ, ಸ.ನಂ. 96/5ರಲ್ಲಿ 1–00 ಎಕರೆ ಸ.ನಂ. 103ರಲ್ಲಿ 1–32 ಎ/ಗುಂ ಒಟ್ಟು 17–26 ಎಕರೆ/ಗುಂಟೆ ಜಮೀನನ್ನು **ಶೈಕ್ಷಣಿಕ** ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1ಎ) ರಡಿ ವಿನಾಯತಿ ನೀಡಲು ಕೋರಿ ಜಿಲ್ಲಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ : ಎಲ್.ಆರ್.ಎಫ್/(109)ಎನ್‌ಎ/ಸಿಆರ್/05/2013–14, ದಿನಾಂಕ: 28–12–2013ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974ರ ನಿಯಮ 38–ಬಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109(1)ರಡಿ ಮೇಲ್ಕಂಡ ಒಟ್ಟು 17 ಎಕರೆ 26 ಗುಂಟೆ ಕೃಷಿ ಜಮೀನನ್ನು ಖರೀದಿಸಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ :–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ದ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳು ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 857**
**SC 20**

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ: ಕಂಇ 23 ಎಲ್‌ಆರ್‌ಎಂ 2014, ಬೆಂಗಳೂರು, ದಿನಾಂಕ: 11ನೇ ನವೆಂಬರ್, 2014

**ಮೆ॥ ಆರ್.ಬಿ.ಎಸ್.ಎಸ್.ಎನ್. ಫೆರಸ್ಸ್ ಪ್ರೈವೇಟ್ ಲಿ., ಕಾರಿಗನೂರು ಬಳ್ಳಾರಿ,** ಇವರಿಗೆ ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಹಂಪಾಪಟ್ಟಣ ಗ್ರಾಮದ ಸ.ನಂ. 1ಡಿ/1ಸಿ ಹಾಗೂ ವರದಾಪುರ ಗ್ರಾಮದ ಸ.ನಂ. 351ಬಿ ಮತ್ತು ವ್ಯಾಸಾಪುರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 17 ಎಕರೆ 30 ಸೆಂಟ್ಸ್ ಜಮೀನನ್ನು **ಕೈಗಾರಿಕಾ** ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1ಎ) ರಡಿ ವಿನಾಯತಿ ನೀಡಲು ಕೋರಿ ಜಿಲ್ಲಾಧಿಕಾರಿ, ಬಳ್ಳಾರಿ ಇವರ ಪತ್ರ ಸಂಖ್ಯೆ : ಕಂ/ಭೂ.ಸು/26/2010-11, ದಿನಾಂಕ: 28-02-2014ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974ರ ನಿಯಮ 38-ಬಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109(1ಎ)ರಡಿ ಮೇಲ್ಕಂಡ ಒಟ್ಟು 17 ಎಕರೆ 30 ಸೆಂಟ್ಸ್ ಕೃಷಿ ಜಮೀನನ್ನು ಖರೀದಿಸಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ :-

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಬಿ.ಎಂ. ದಾಕ್ಷಾಯಣಮ್ಮ,
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ).

P.R. 858
SC 20

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ: ಕಂಇ 41 ಎಲ್‌ಆರ್‌ಎಂ 2014, ಬೆಂಗಳೂರು, ದಿನಾಂಕ: 11ನೇ ನವೆಂಬರ್, 2014

**ಮೆ॥ ಜೆ.ಎಸ್.ಡಬ್ಲ್ಯು ಸ್ಟೀಲ್ ಲಿ., ವಿಧ್ಯಾನಗರ, ತೋರಣಗಲ್ಲು** ಇವರಿಗೆ ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಯರಬನಹಳ್ಳಿ ಗ್ರಾಮದ ವಿಸ್ತೀರ್ಣ 91–57 ಎ/ಸೆಂಟ್ಸ್ ಎಕರೆ ಹಾಗೂ ಚಿಕ್ಕಂತಾಪುರ ಗ್ರಾಮದ ವಿಸ್ತೀರ್ಣ 29–50 ಎ/ಸೆಂಟ್ಸ್ ಒಟ್ಟು 121 ಎಕರೆ 07 ಸೆಂಟ್ಸ್ ಕೃಷಿ ಜಮೀನನ್ನು **ಕೈಗಾರಿಕಾ** (ಟ್ರಕ್ ಟರ್ಮಿನಲ್) ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1ಎ) ರಡಿ ವಿನಾಯತಿ ನೀಡಲು ಕೋರಿ ಜಿಲ್ಲಾಧಿಕಾರಿ, ಬಳ್ಳಾರಿ ಇವರ ಪತ್ರ ಸಂಖ್ಯೆ : ಕಂ/ಭೂ.ಸು/01/2013–14, ದಿನಾಂಕ: 15–05–2014ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ, ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961 ರ ಕಲಂ 109(1) ಮತ್ತು ಕರ್ನಾಟಕ ಭೂ ಸುಧಾರಣಾ ನಿಯಮಗಳು 1974ರ ನಿಯಮ 38–ಬಿ ರಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ, ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯಿತಿ ನೀಡಿ, ಕಲಂ 109(1ಎ)ರಡಿ ಮೇಲ್ಕಂಡ ಒಟ್ಟು 121 ಎಕರೆ 07 ಸೆಂಟ್ಸ್ ಕೃಷಿ ಜಮೀನನ್ನು ಖರೀದಿಸಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ :–

1) ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸಂಬಂಧಪಟ್ಟ ಜಮೀನನ್ನು ಎರಡು ವರ್ಷದೊಳಗೆ ಉಪಯೋಗಿಸತಕ್ಕದ್ದು ಮತ್ತು ಈ ಕುರಿತಂತೆ ಸಂಬಂಧಪಟ್ಟ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2) ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ (1961)ರ ಕಲಂ 109ರನ್ವಯ ವಿನಾಯಿತಿ ಮಾತ್ರವಾಗಿದ್ದು ಬೇರೆ ಕಾನೂನುಗಳು ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

3) ಈ ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ, ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

4) ಸದರಿ ಜಮೀನನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ (1964)ದ ಕಲಂ 95ರ ಮೇರೆಗೆ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ಅನುಮತಿ ಪಡೆಯತಕ್ಕದ್ದು.

5) ಉಲ್ಲೇಖಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಿಗಳಿಂದ ಅನುಮೋದನೆ ಪಡೆಯತಕ್ಕದ್ದು.

6) ಆ ಜಮೀನು ಯಾವುದೇ ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದಲ್ಲಿ ಸಂಬಂಧಪಟ್ಟ ಪ್ರಾಧಿಕಾರದ ಅನುಮತಿ ಪಡೆಯತಕ್ಕದ್ದು.

7) ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರಂತೆ ಮಂಜೂರು ಮಾಡಬೇಕಾದಂತಹ ಯಾವುದೇ ಸರ್ಕಾರಿ ಜಮೀನುಗಳು ಇದ್ದಲ್ಲಿ ಅದನ್ನು ಹೊರತುಪಡಿಸಲಾಗಿದೆ.

8) ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತ ಸರ್ಕಾರದ ಕಾನೂನುಗಳನ್ನು ಪಾಲಿಸತಕ್ಕದ್ದು.

ಈ ಮೇಲಿನ ಯಾವುದೇ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಬಿ.ಎಂ. ದಾಕ್ಷಾಯಣಮ್ಮ,
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ).

P.R. 859
SC 20

**GOVERNMENT OF KARNATAKA**
**DIRECTORATE OF ECONOMICS AND STATISTICS, BANGALORE-1**
**Consumer Price Index Numbers for Industrial Workers**
**No. DES 24 PWX 2014, dated 20-10-2014**

**State : Karnataka** **Base : 1987-88=100** **Month : August**
**Date: 20-10-2014**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| **I.** | **FOOD:** | | | | | | | | | | | |
| | (a) Cereals & Cereals Products | 981 | 956 | 1091 | 902 | 929 | 988 | 976 | 1025 | 804 | 1080 | 971 |
| | (b) Pulses & Pulse Products | 714 | 767 | 829 | 887 | 708 | 766 | 760 | 783 | 818 | 730 | 736 |
| | (c) Oil & Fats | 467 | 413 | 469 | 424 | 442 | 468 | 430 | 514 | 440 | 407 | 437 |
| | (d) Meat Fish & Eggs | 907 | 1126 | 1157 | 1042 | 993 | 1083 | 960 | 1084 | 728 | 1213 | 1088 |
| | (e) Milk & Milk Products | 737 | 684 | 775 | 875 | 759 | 779 | 758 | 795 | 684 | 755 | 754 |
| | (f) Condiments & Spices | 649 | 809 | 1093 | 936 | 661 | 760 | 879 | 873 | 734 | 857 | 787 |
| | (g) Vegetables & Fruits | 912 | 1029 | 1083 | 1031 | 849 | 887 | 920 | 1114 | 813 | 707 | 1219 |
| | (h) Other Food | 598 | 975 | 898 | 811 | 721 | 662 | 748 | 767 | 782 | 695 | 654 |
| | **FOOD GROUP INDEX** | **807** | **884** | **968** | **866** | **794** | **823** | **849** | **926** | **753** | **879** | **851** |
| **II.** | Pan, Supari, Tobacco & Intoxicants | 837 | 1070 | 934 | 876 | 731 | 922 | 788 | 858 | 592 | 727 | 881 |
| **III.** | Fuel & Light | 677 | 627 | 694 | 784 | 689 | 699 | 678 | 729 | 599 | 917 | 526 |
| **IV.** | Housing | 100 | 100 | 100 | 100 | 100 | 100 | 100 | 100 | 100 | 100 | 100 |
| **V.** | Clothing, Bedding & Footwear | 359 | 553 | 519 | 480 | 403 | 472 | 602 | 728 | 362 | 720 | 235 |
| **VI.** | **Miscellaneous:** | | | | | | | | | | | |
| | (a) Medical Care | 751 | 966 | 643 | 493 | 387 | 362 | 687 | 631 | 465 | 507 | 374 |
| | (b) Education, Recreation & Amusement | 861 | 792 | 1155 | 504 | 1004 | 1148 | 854 | 641 | 1162 | 1585 | 1007 |
| | (c) Transport & Communication | 709 | 855 | 777 | 788 | 868 | 811 | 818 | 1116 | 920 | 777 | 809 |
| | (d) Personal Care & effects | 444 | 533 | 585 | 603 | 693 | 474 | 501 | 556 | 546 | 525 | 495 |
| | (e) Other | 559 | 543 | 714 | 849 | 503 | 512 | 544 | 736 | 405 | 706 | 470 |
| | Miscellaneous Group | 626 | 685 | 755 | 633 | 686 | 640 | 642 | 679 | 677 | 756 | 593 |
| | **GENERAL INDEX** | **654** | **711** | **767** | **708** | **637** | **658** | **705** | **764** | **632** | **754** | **583** |
| | To convert to Base 1960 Multiply by Linking Factor. | **7.39** | **9.19** | **8.27** | **-** | **8.26** | **8.56** | **9.25** | **7.92** | **9.31** | **-** | **-** |

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು

# GOVERNMENT OF INDIA

## MINISTRY OF LABOUR

## LABOUR BUREAU

**'CLEREMONT' Shimla-171004**

**Consumer Price Index Numbers for Industrial Workers (Base : 2001=100)**

**Month : August, 2014**

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| **FOOD** | | | | | |
| (a) Cereals Products | 265 | 293 | 267 | 268 | 301 |
| (b) Pulses Products | 249 | 253 | 280 | 276 | 255 |
| (c) Oils & Fats | 233 | 247 | 203 | 277 | 213 |
| (d) Meat, Fish & Eggs | 382 | 330 | 342 | 316 | 326 |
| (e) Milk Products | 298 | 274 | 252 | 266 | 291 |
| (f) Condiments & Spices | 288 | 324 | 323 | 295 | 309 |
| (g) Vegetables & Fruits | 446 | 365 | 345 | 358 | 349 |
| (h) Other Food | 266 | 293 | 273 | 281 | 274 |
| **I. FOOD GROUP** | 293 | 300 | 278 | 290 | 296 |
| II. Pan, Supari, Tobacco & Intoxicants | 273 | 265 | 285 | 236 | 310 |
| III. Fuel & Light Group | 215 | 181 | 208 | 351 | 212 |
| IV. Housing Group | 242 | 226 | 354 | 102 | 276 |
| V. Clothing, Bedding & Footwear | 168 | 157 | 167 | 189 | 159 |
| Miscellaneous | | | | | |
| (a) Medical care | 193 | 247 | 211 | 232 | 186 |
| (b) Education, Recreation and Amusement | 173 | 173 | 177 | 332 | 135 |
| (c) Transport and Communication | 324 | 346 | 332 | 303 | 283 |
| (d) Personal Care & Effects | 215 | 268 | 250 | 246 | 227 |
| (e) Others | 231 | 223 | 227 | 212 | 285 |
| VI. Miscellaneous Group | 223 | 261 | 241 | 269 | 216 |
| **GENERAL INDEX** | **259** | **260** | **270** | **263** | **261** |

**L.R. CHAUHAN**
ECONOMIC OFFICER

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು

**P.R. 843**
**SC 05**

## GOVERNMENT OF KARNATAKA
## DIRECTORATE OF ECONOMICS AND STATISTICS, BANGALORE-1
### Consumer Price Index Numbers for Industrial Workers
### No. DES 24 PWX 2014, dated 05-11-2014

**State : Karnataka** **Base : 1987-88=100** **Month : September**
**Date: 05-11-2014**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| **I.** | **FOOD:** | | | | | | | | | | | |
| | (a) Cereals & Cereals Products | 981 | 956 | 1116 | 891 | 930 | 1008 | 985 | 1044 | 804 | 1090 | 980 |
| | (b) Pulses & Pulse Products | 725 | 776 | 819 | 906 | 710 | 768 | 766 | 787 | 827 | 744 | 745 |
| | (c) Oil & Fats | 469 | 413 | 476 | 412 | 433 | 467 | 435 | 515 | 440 | 408 | 440 |
| | (d) Meat Fish & Eggs | 907 | 1122 | 1156 | 1042 | 1004 | 1082 | 957 | 1069 | 728 | 1213 | 1088 |
| | (e) Milk & Milk Products | 737 | 684 | 775 | 879 | 759 | 784 | 758 | 795 | 684 | 770 | 754 |
| | (f) Condiments & Spices | 658 | 840 | 1077 | 1010 | 671 | 739 | 874 | 883 | 731 | 786 | 769 |
| | (g) Vegetables & Fruits | 907 | 997 | 1085 | 1056 | 801 | 865 | 939 | 1055 | 833 | 678 | 1261 |
| | (h) Other Food | 598 | 970 | 896 | 799 | 723 | 662 | 746 | 773 | 784 | 695 | 655 |
| | **FOOD GROUP INDEX** | **809** | **883** | **974** | **869** | **791** | **826** | **854** | **929** | **755** | **879** | **858** |
| **II.** | Pan, Supari, Tobacco & Intoxicants | 837 | 1082 | 936 | 924 | 762 | 931 | 797 | 860 | 592 | 727 | 862 |
| **III.** | Fuel & Light | 677 | 627 | 700 | 784 | 689 | 706 | 687 | 750 | 606 | 945 | 526 |
| **IV.** | Housing | 100 | 100 | 100 | 100 | 100 | 100 | 100 | 100 | 100 | 100 | 100 |
| **V.** | Clothing, Bedding & Footwear | 359 | 554 | 519 | 483 | 404 | 472 | 615 | 734 | 362 | 720 | 236 |
| **VI.** | **Miscellaneous:** | | | | | | | | | | | |
| | (a) Medical Care | 751 | 966 | 643 | 493 | 387 | 362 | 688 | 631 | 465 | 517 | 374 |
| | (b) Education, Recreation & Amusement | 861 | 792 | 1154 | 504 | 1004 | 1148 | 854 | 641 | 1162 | 1585 | 1011 |
| | (c) Transport & Communication | 709 | 855 | 777 | 788 | 868 | 811 | 818 | 1115 | 920 | 777 | 795 |
| | (d) Personal Care & effects | 444 | 533 | 585 | 616 | 716 | 474 | 506 | 558 | 546 | 525 | 495 |
| | (e) Other | 559 | 570 | 715 | 849 | 503 | 512 | 544 | 735 | 405 | 706 | 470 |
| | Miscellaneous Group | 626 | 692 | 755 | 634 | 692 | 640 | 644 | 679 | 677 | 758 | 592 |
| | **GENERAL INDEX** | **655** | **712** | **771** | **712** | **638** | **661** | **709** | **768** | **634** | **756** | **585** |
| | To convert to Base 1960 Multiply by Linking Factor. | **7.39** | **9.19** | **8.27** | **-** | **8.26** | **8.56** | **9.25** | **7.92** | **9.31** | **-** | **-** |

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು

# GOVERNMENT OF INDIA

## MINISTRY OF LABOUR

## LABOUR BUREAU

**'CLEREMONT' Shimla-171004**

**Consumer Price Index Numbers for Industrial Workers (Base : 2001=100) Month : September 2014**

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| **FOOD** | | | | | |
| (a) Cereals Products | 268 | 294 | 274 | 266 | 301 |
| (b) Pulses Products | 272 | 266 | 279 | 276 | 260 |
| (c) Oils & Fats | 239 | 245 | 205 | 278 | 210 |
| (d) Meat, Fish & Eggs | 360 | 337 | 352 | 323 | 323 |
| (e) Milk Products | 312 | 274 | 252 | 266 | 291 |
| (f) Condiments & Spices | 278 | 313 | 326 | 292 | 281 |
| (g) Vegetables & Fruits | 418 | 342 | 319 | 348 | 322 |
| (h) Other Food | 269 | 294 | 274 | 281 | 274 |
| **VII. FOOD GROUP** | 293 | 298 | 280 | 289 | 291 |
| VIII. Pan, Supari, Tobacco & Intoxicants | 276 | 266 | 290 | 236 | 310 |
| IX. Fuel & Light Group | 217 | 182 | 210 | 353 | 214 |
| X. Housing Group | 242 | 226 | 354 | 102 | 276 |
| XI. Clothing, Bedding & Footwear | 170 | 151 | 172 | 188 | 184 |
| Miscellaneous | | | | | |
| (a) Medical care | 198 | 249 | 216 | 232 | 186 |
| (b) Education, Recreation and Amusement | 172 | 174 | 183 | 332 | 136 |
| (c) Transport and Communication | 322 | 344 | 331 | 303 | 279 |
| (d) Personal Care & Effects | 211 | 262 | 253 | 247 | 225 |
| (e) Others | 225 | 223 | 238 | 212 | 285 |
| XII. Miscellaneous Group | 223 | 260 | 245 | 270 | 215 |
| **GENERAL INDEX** | **258** | **259** | **272** | **263** | **260** |

**L.R. CHAUHAN**
ECONOMIC OFFICER

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು

**P.R. 844**
**SC 05**

## ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಕಛೇರಿಯ ನಡವಳಿಗಳು

**ವಿಷಯ :** ಶ್ರೀ ಬದ್ರುದ್ದೀನ್ ಷರೀಫ್, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಪಾಲಿಟೆಕ್ನಿಕ್, ಕೆ.ಜಿ.ಎಫ್, ಇವರು ತಮ್ಮ ಪತ್ನಿ ಶ್ರೀಮತಿ ಸೈಯದ್ ಅಸಿಮ ಅಂಜುಮ್ ಇವರಿಗೆ ವರದಕ್ಷಿಣೆ ಕಿರುಕುಳ ನೀಡಿರುತ್ತಾರೆ ಎಂಬ ದೂರಿನ ಬಗ್ಗೆ.

**ಓದಲಾಗಿದೆ :**

1. ಶ್ರೀಮತಿ ಸೈಯದ್ ಅಸಿಮ ಅಂಜುಮ್ ಇವರು ನಿರ್ದೇಶಕರಿಗೆ ಸಲ್ಲಿಸಿರುವ ದೂರಿನ ಪತ್ರ ದಿನಾಂಕ: 9.05.2013
2. ಶ್ರೀಮತಿ ಸೈಯದ್ ಅಸಿಮ ಅಂಜುಮ್ ಇವರು ಸಬ್‌ಇನ್ಸ್‌ಪೆಕ್ಟರ್ ಆಫ್ ಪೋಲಿಸ್, ಕೋಲಾರ ನಗರ ಪೋಲಿಸ್ ಸ್ಟೇಷನ್, ಕೋಲಾರ ಇವರಿಗೆ ಸಲ್ಲಿಸಿರುವ ದೂರಿನ ಪತ್ರ ದಿನಾಂಕ: 6.05.2013
3. ಕೋಲಾರ ನಗರ ಪೋಲಿಸ್ ಸ್ಟೇಷನ್ ಎಫ್‌ಐಆರ್ ಸಂಖ್ಯೆ: 0136/2013, ದಿ:6.5.2013

4. ಪೋಲಿಸ್ ವೃತ್ತ ನಿರೀಕ್ಷಕರವರ ಕಛೇರಿ ಇವರು ಪ್ರಿನ್ಸಿಪಾಲರಿಗೆ ಬರೆದ ಪತ್ರ ದಿ:16.5.2013
5. ಪ್ರಿನ್ಸಿಪಾಲರು, ಸ.ಪಾ ಕೆ.ಜಿ.ಎಫ್ ಇವರು ನಿರ್ದೇಶಕರಿಗೆ ಬರೆದ ಪತ್ರ
6. ಶ್ರೀ ಬದ್ರುದ್ದೀನ್ ಷರೀಫ್ ಇವರನ್ನು ಅಮಾನತ್ತುಗೊಳಿಸಿದ ದಿನಾಂಕ: 21.05.2013
7. ದೋಷಾರೋಪಣಾ ಪಟ್ಟಿ ದಿನಾಂಕ; 07.08.2013
8. ಶ್ರೀ ಎಸ್.ಇಂದುಧರ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ನೇಮಕ ಮಾಡಿದ ದಿನಾಂಕ: 18.09.2013
9. ನ್ಯಾಯಾಧೀಶರ ಅಂತಿಮ ವಿಚಾರಣಾ ವರದಿ ದಿನಾಂಕ: 28.03.2014
10. 2ನೇ ಕಾರಣ ಕೇಳುವ ನೋಟಿಸು ದಿನಾಂಕ: 29.03.2014
11. 2ನೇ ಕಾರಣ ಕೇಳುವ ನೋಟಿಸಿಗೆ ಉತ್ತರ ಸಲ್ಲಿಸಿದ ದಿನಾಂಕ : 14-05-2014.

**ಪ್ರಸ್ತಾವನೆ :**

ಸರ್ಕಾರಿ ಪಾಲಿಟೆಕ್ನಿಕ್, ಕೆ.ಜಿ.ಎಫ್ ಇಲ್ಲಿ ದ್ವಿತೀಯ ದರ್ಜೆ ಸಹಾಯಕರು (ಹಾಲಿ ಅಮಾನತ್ತಿನಲ್ಲಿರುವ) ಶ್ರೀ ಬದ್ರುದ್ದೀನ್ ಷರೀಫ್, ಇವರ ವಿರುದ್ಧ ಅವರ ಪತ್ನಿ ಶ್ರೀಮತಿ ಸೈಯದ್ ಆಸಿಮ ಅಂಜುಮ್ ಇವರು ನನಗೆ ವರದಕ್ಷಿಣೆ ಕಿರುಕುಳ ನೀಡುತ್ತಿರುತ್ತಾರೆ ಎಂದು ದಿ: 06-05-2013 ರಂದು ಕೋಲಾರದ ವೃತ್ತ ನಿರೀಕ್ಷಕರವರ ಕಛೇರಿಗೆ ಲಿಖಿತವಾಗಿ ದೂರು ನೀಡಿ ನಾನು ಶ್ರೀ ಬದ್ರುದ್ದೀನ್ ಷರೀಫ್ ಇವರನ್ನು ದಿ: 12-07-2012 ರಂದು ವಿವಾಹ ಆಗಿದ್ದೇನೆ. ಕೆಲವು ದಿನಗಳ ನಂತರ ನನ್ನ ಗಂಡ, ನನ್ನ ಅತ್ತೆ ಶ್ರೀಮತಿ ವಹಿದಾ ಬೇಗಂ, ನನ್ನ ಗಂಡನ ತಂಗಿ ಹರ್ಷಿಯಾ ಮತ್ತು ನನ್ನ ಗಂಡನ ಚಿಕ್ಕಮ್ಮ ಜಮರುತ್ ಬೇಗಂ ಹಾಗೂ ಅವರ ಕುಟುಂಬದ ಸದಸ್ಯರು ನನ್ನನ್ನು ತುಚ್ಛವಾದ ಮಾತುಗಳಿಂದ ಪ್ರತಿದಿನ ಬೈಯುವುದು ಮತ್ತು ಮಾನಸಿಕವಾಗಿ ಹಿಂಸೆ ನೀಡುವುದು ದೈಹಿಕವಾಗಿ ಹಲ್ಲೆ ನಡೆಸುವುದು ಮತ್ತು ತಂದೆ ತಾಯಿ ಮನೆಯಿಂದ ವರದಕ್ಷಿಣೆ ಹಣವನ್ನು ತರಲು ಒತ್ತಾಯ ಪಡಿಸಿರುತ್ತಾರೆ. ಅಲ್ಲದೆ ನಾನು ಎಂ.ಎ ಎಂಇಡಿ ಪಾಸು ಮಾಡಿ ಐಬಿಎಂ ಪಿಯು ಕಾಲೇಜ್, ಬಂಗಾರಪೇಟೆಯಲ್ಲಿ 2 ವರ್ಷಗಳಿಂದ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ಈಗ ನನ್ನ ಅತ್ತೆ ಮನೆಯವರು ನನ್ನ ಈ ಕೆಲಸವನ್ನು ಬಿಟ್ಟು ಬಿಡು ಎಂದು ಒತ್ತಾಯ ಮಾಡುತ್ತಿದ್ದಾರೆ. ಈ ದಿನ ಬೆಳಿಗ್ಗೆ ನನ್ನ ಗಂಡ, ಅತ್ತೆ, ತಂಗಿ ಮತ್ತು ನನ್ನ ಗಂಡನ ಚಿಕ್ಕಮ್ಮ ಮತ್ತು ದೊಡ್ಡಪ್ಪ ಸೈಯದ್ ಮುನೀರ್ ಅಹಮದ್ ಇವರು ನನ್ನ ಮೇಲೆ ಹಲ್ಲೆ ಮಾಡಿ ನನ್ನ ಮಾಂಗಲ್ಯವನ್ನು ಕಿತ್ತುಕೊಂಡಿರುತ್ತಾರೆ ಮತ್ತು ಹಲ್ಲೆ ಮಾಡಿ ನನ್ನ ಎಡಗೈ ಮೇಲೆ ಗಾಯ ಮಾಡಿರುತ್ತಾರೆ. ನನ್ನ ಗಂಡನ ಮನೆಯಲ್ಲಿದ್ದರೆ ನನಗೆ ಪ್ರಾಣಾಪಾಯ ಇದೆ ಕಾರಣ ನನ್ನ ಗಂಡ ಮತ್ತು ಅವರ ಕುಟುಂಬದವರು ನನ್ನನ್ನು ಕೊಲ್ಲುತ್ತೇನೆಂದು ಹೇಳಿರುತ್ತಾರೆ. ಆದ್ದರಿಂದ ತಾವು ಅವರ ಮೇಲೆ ಕಠಿಣ ಕ್ರಮ ಕೈಗೊಂಡು ನನಗೆ ಕಾನೂನು ರೀತಿ ನ್ಯಾಯ ಒದಗಿಸಬೇಕೆಂದು ವಿನಂತಿಸುತ್ತಾ ಸಬ್ ಇನ್ಸ್‌ಪೆಕ್ಟರ್ ಆಫ್ ಪೋಲಿಸ್ ಕೋಲಾರ ನಗರ ಪೋಲಿಸ್ ಸ್ಟೇಷನ್ ಕೋಲಾರ ಇವರಿಗೆ ದೂರು ನೀಡಿರುತ್ತಾರೆ.

ಸದರಿ ಪ್ರಕರಣವನ್ನು ಕೈಗೆತ್ತಿಕೊಂಡ ಪೋಲಿಸ್ ಇನ್ಸ್‌ಪೆಕ್ಟರ್‌ರವರು ದಿನಾಂಕ: 06-05-2013 ರಂದು ಸಂಜೆ 7-00 ಗಂಟೆಯಲ್ಲಿ ನಿಮ್ಮನ್ನು ದಸ್ತಗಿರಿ ಮಾಡಿ ನ್ಯಾಯಾಲಯದ ಮುಂದೆ ಹಾಜರುಪಡಿಸಿದ್ದು ನ್ಯಾಯಾಲಯವು ನಿಮ್ಮನ್ನು ನ್ಯಾಯಾಂಗ ಬಂಧನಕ್ಕೆ ಒಳಪಡಿಸಿರುತ್ತದೆ. 06-05-2013 ರಿಂದ 9-05-2013 ವರೆಗೆ ನ್ಯಾಯಾಂಗ ಬಂಧನದಲ್ಲಿದ್ದು ದಿನಾಂಕ: 09-05-2013 ರಂದು ನ್ಯಾಯಾಲಯದ ಜಾಮೀನಿನ ಮೇಲೆ ಬಿಡುಗಡೆ ಆಗಿರುತ್ತೀರಿ ಎಂದು ಪೋಲಿಸ್ ವೃತ್ತ ನಿರೀಕ್ಷಕರವರ ಕಛೇರಿಯಿಂದ ಲಿಖಿತ ಪತ್ರದ ಮುಖೇನ ತಿಳಿದುಬಂದಿರುತ್ತದೆ. ಸದರಿ ಪ್ರಕರಣದ ಬಗ್ಗೆ ಪ್ರಥಮ ವರ್ತಮಾನ ವರದಿ ಸಹ ಆಗಿರುತ್ತದೆ (FIR). ಇವರು ಒಬ್ಬ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ ಕರ್ನಾಟಕ ನಾಗರೀಕ ಸೇವಾ ನಡತೆ [ವರ್ತನೆ] ನಿಯಮಗಳು 1966 ರ ನಿಯಮ 3 (1)ರ ಉಪನಿಯಮ (iii) ಮತ್ತು 14 ಎ ಮತ್ತು 29 ಸಿ ನ್ನು ಉಲ್ಲಂಘಿಸಿ ಕ್ರಿಮಿನಲ್ ಮೊಕದ್ದಮೆಗೆ ಒಳಗಾಗಿರುತ್ತಾರೆ.

ಉಲ್ಲೇಖ(7)ರ ಪತ್ರದಲ್ಲಿ ಸದರಿಯವರಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿತ್ತು. ಅವರು ನೀಡಿದ ವಿವರಣೆಯನ್ನು ಒಪ್ಪದೇ ಶಿಸ್ತುಪ್ರಾಧಿಕಾರವು ಈ ಪ್ರಕರಣದ ಬಗ್ಗೆ ಇಲಾಖಾ ಹಂತದಲ್ಲಿ ನಿಯಮಾನುಸಾರ ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಎಸ್.ಇಂದುಧರ, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿ ಅದರಂತೆ ಸದರಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ವರದಿ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ಶ್ರೀ ಬದ್ರುದ್ದೀನ್ ಷರೀಫ್ ದ್ವಿತೀಯ ದರ್ಜೆ ಸಹಾಯಕರು ( ಹಾಲಿ ಅಮಾನತ್ತಿನಲ್ಲಿರುವ ) ಇವರ ಮೇಲೆ ಹೊರಿಸಲಾದ ಆರೋಪ ರುಜುವಾತಾಗಿರುತ್ತದೆ ಎಂದು ವರದಿಯಲ್ಲಿ ಉಲ್ಲೇಖಿಸಿರುತ್ತಾರೆ. ಸದರಿ ವರದಿಯನ್ನು ಲಗತ್ತಿಸಿ ನಿಯಮಾನುಸಾರ ದಿನಾಂಕ: 29.03.2014 ರಂದು ಜಾರಿ ಮಾಡಿ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಲು 30 ದಿನಗಳ ಕಾಲಾವಕಾಶ ನೀಡಲಾಗಿತ್ತು. ಅದರಂತೆ ಆರೋಪಿತರು ದಿನಾಂಕ: 14.05.2014 ರಂದು ತಮ್ಮ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿರುತ್ತಾರೆ. ಸದರಿ ಸಮಜಾಯಿಷಿಯನ್ನು ಪರಿಶೀಲಿಸಿದ ಶಿಸ್ತು ಪ್ರಾಧಿಕಾರವು ಅವರ ಸಮಜಾಯಿಷಿಯನ್ನು ಒಪ್ಪದೆ ಕರ್ನಾಟಕ ನಾಗರೀಕ ಸೇವಾ ನಡತೆ(ವರ್ತನೆ)ನಿಯಮಗಳು 1966ರ ನಿಯಮ 3 ಉಪನಿಯಮ 1 (i) (ii) (iii) ನ್ನು ಮತ್ತು ನಿಯಮ 14(ಎ), 29(ಸಿ) ಇವುಗಳನ್ನು ಉಲ್ಲಂಘಿಸಿದ ಆರೋಪದ ಮೇರೆಗೆ ಹಾಗೂ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಂತಿಮ ವಿಚಾರಣಾ ವರದಿಯನ್ನು ಅಂಗೀಕರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಟಿಇ 3 ಡಿಇಕ್ಯೂ(1)2013, ದಿನಾಂಕ: 26.09.2014**

ಸರ್ಕಾರಿ ಪಾಲಿಟೆಕ್ನಿಕ್, ಕೆ.ಜಿ.ಎಫ್ ಇಲ್ಲಿ ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಬದ್ರುದ್ದೀನ್ ಷರೀಫ್ (ಹಾಲಿ ಅಮಾನತ್ತಿನಲ್ಲಿರುವ) ಇವರು ತಮ್ಮ ಪತ್ನಿಗೆ ವರದಕ್ಷಿಣೆ ಕಿರುಕುಳ ನೀಡುತ್ತಿರುತ್ತಾರೆ ಎಂಬ ಆರೋಪ ಸಾಬೀತಾದ ಮೇರೆಗೆ ಕರ್ನಾಟಕ ನಾಗರೀಕ ಸೇವಾ ನಡತೆ(ವರ್ತನೆ)ನಿಯಮಗಳು 1966ರ ನಿಯಮ 3 ಉಪನಿಯಮ 1 (i) (ii) (iii) ನ್ನು ಮತ್ತು ನಿಯಮ 14(ಎ), 29(ಸಿ) ಇವುಗಳನ್ನು ಉಲ್ಲಂಘಿಸಿದ್ದರಿಂದ

ಕರ್ನಾಟಕ ಸರ್ಕಾರಿ ಸೇವಾ [ವರ್ಗೀಕರಣ ನಿಯಂತ್ರಣ ಹಾಗೂ ಮೇಲ್ಮನವಿ] ನಿಯಮಾವಳಿ 1957 ರ ನಿಯಮ 8 [vi] ರಂತೆ ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ **ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ** ಆದೇಶಿಸಲಾಗಿದೆ.

P.R. 835
SC-10

**ನಿರ್ದೇಶಕರು**
ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ
ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು

**ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಕಛೇರಿಯ ನಡವಳಿಗಳು**

**ವಿಷಯ :** ಶ್ರೀ ಎನ್. ನರಸಿಂಹರಾಜು, ಸೇವಕರು, ಸರ್ಕಾರಿ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆ, ಹೆಸರಘಟ್ಟ ಬೆಂಗಳೂರು, ಇವರ ಕಾನೂನು ಬಾಹಿರವಾಗಿ ದ್ವಿಪತ್ನಿಯನ್ನು ಹೊಂದಿರುವ ಸಂಬಂಧದ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಶ್ರೀಮತಿ ಸ್ಫೂರ್ತಿ ದೇವರಾಜ್, ಇವರ ಸಲ್ಲಿಸಿರುವ ದೂರಿನ ಪತ್ರ ದಿನಾಂಕ: 28.07.2011
2. ಶ್ರೀ ನಿರಂಜನ್‌ದಾಸ್ ರಾಜ್ಬಾನ್ ಇವರ ನೇತೃತ್ವದಲ್ಲಿ ನಡೆದ ಪೂರ್ವಭಾವಿ ಇಲಾಖಾ ವಿಚಾರಣಾ ವರದಿ.
3. ದೋಷಾರೋಪಣಾ ಪಟ್ಟಿ ದಿನಾಂಕ: 15.12.2012
4. ಈ ಕಛೇರಿಯ ಕಾರಣ ಕೇಳುವ ನೋಟಿಸು ದಿನಾಂಕ: 15.09.2012
5. ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣೆಗೆ ನೇಮಿಸಲಾದ ಆದೇಶ ದಿನಾಂಕ: 04.03.2012
6. ಶ್ರೀ ಎಂ.ಜಿ.ಹಿರೇಮಠ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ನಡೆಸಿದ ವಿಚಾರಣಾ ವರದಿ ದಿನಾಂಕ: 07.03.2014
7. 2ನೇ ಕಾರಣ ಕೇಳುವ ನೋಟಿಸು ದಿನಾಂಕ: 11.03.2014
8. ಸರ್ಕಾರಕ್ಕೆ ಬರೆದ ಪತ್ರ ಸಂ: ಡಿಟಿಇ 3 ಡಿಇಕ್ಯೂ(2)2013, ದಿ:16.05.2014
9. ಸರ್ಕಾರದ ಪತ್ರ ಸಂ: ಇಡಿ 159 ಟಿಪಿಇ 2014, ದಿನಾಂಕ: 21.07.2014
10. ಶ್ರೀಮತಿ ಸರಸ್ವತಿ ಸಿ, ಇವರ ವಿವಾಹ ನೋಂದಣಿ ಪ್ರಮಾಣ ಪತ್ರ ಸಂಖ್ಯೆ: ಜೆಪಿಎನ್/ಎಂ422–2007–08, ಜೆ.ಪಿ.ನಗರ, ಬೆಂಗಳೂರು ದಿನಾಂಕ: 14.12.2007
11. ಶ್ರೀಮತಿ ಸ್ಫೂರ್ತಿ ದೇವರಾಜ್ ಇವರ ವಿವಾಹ ನೋಂದಣಿ ಪ್ರಮಾಣ ಪತ್ರ ಸಂಖ್ಯೆ: ಜೆಎವ್ಯೆ–ಎಂ297–2007–08, ಜಯನಗರ, ದಿನಾಂಕ: 25.05.2007
12. ಶ್ರೀಮತಿ ಸ್ಫೂರ್ತಿ ದೇವರಾಜ್ ಇವರ ವಿವಾಹ ಲಗ್ನ ಪತ್ರಿಕೆ
13. ಶ್ರೀಮತಿ ಸರಸ್ವತಿ ಇವರ ಮಗನ ಜನನ ಪ್ರಮಾಣ ಪತ್ರ ಸಂ:34076, ದಿ:29.12.2006
14. ಶ್ರೀಮತಿ ಸ್ಫೂರ್ತಿ ಇವರ ಮಗುವಿನ ಜನನ ಪ್ರಮಾಣ ಪತ್ರ ಸ: 145879, ದಿ:11.10.2010

**ಪ್ರಸ್ತಾವನೆ :**

ಸರ್ಕಾರಿ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆ, ಹೆಸರಘಟ್ಟ, ಬೆಂಗಳೂರು ಇಲ್ಲಿ ಗ್ರೂಪ್ 'ಡಿ' ನೌಕರರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್.ನರಸಿಂಹರಾಜು ಇವರು ನಿಯಮಬಾಹಿರವಾಗಿ 2ನೇ ಮದುವೆ ಮಾಡಿಕೊಂಡಿದ್ದಾರೆ ಎಂದು ಶ್ರೀಮತಿ ಸ್ಫೂರ್ತಿ ದೇವರಾಜ್, ಇವರು ದಿನಾಂಕ: 28–7–2011 ರಂದು ನಿರ್ದೇಶಕರಿಗೆ ಸಲ್ಲಿಸಿದ ದೂರನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎನ್.ನರಸಿಂಹರಾಜು ಇವರು ದಿನಾಂಕ: 4–5–2007 ರಲ್ಲಿ ಧರ್ಮಸ್ಥಳ ಶ್ರೀ ಮಂಜುನಾಥೇಶ್ವರ ದೇವಾಲಯದಲ್ಲಿ ಮದುವೆಯಾಗಿ ದಿನಾಂಕ: 25–5–2007 ರಂದು ಮದುವೆ ಅಧಿಕಾರಿ ಮುಂದೆ ನೋಂದಾಯಿಸಿರುತ್ತದೆ. ನನ್ನ ಗಂಡ ಎಂದು ಹೇಳಿರುವ ಈ ವ್ಯಕ್ತಿ ಬೇರೊಬ್ಬ ಹೆಂಗಸನ್ನು ಮದುವೆ ಮಾಡಿಕೊಂಡಿದ್ದೆ ಎಂದು ಮೋಸ ಮಾಡಿರುತ್ತಾನೆ. ಈ ವಿಚಾರದಲ್ಲಿ ಈತನ ಮೇಲೆ ಕಾನೂನಿನ ರೀತಿ ಕ್ರಮ ತೆಗೆದುಕೊಳ್ಳಬೇಕೆಂದು ತಿಳಿಸಿರುತ್ತಾರೆ. ಈ ಮಧ್ಯೆ ದಿನಾಂಕ: 25–7–2011 ರಲ್ಲಿ ನಿರ್ದೇಶನಾಲಯಕ್ಕೆ ಸಲ್ಲಿಕೆ ಮುಖಾಂತರ ಮನವಿ ಸಲ್ಲಿಸಿ ನನ್ನ ಪತ್ನಿಯಾದ ಸರಸ್ವತಿ.ಸಿ ಇವರು ಒಬ್ಬರೇ ಪತ್ನಿಯಾಗಿದ್ದು ಹಾಗೂ ನನ್ನ ಕುಮಾರ ದರ್ಶನ್ ಎನ್, ಇವರ ಹೆಸರುಗಳನ್ನು ನಾಮ ನಿರ್ದೇಶನ ಪತ್ರದಲ್ಲಿ ಬರೆದು ಸಲ್ಲಿಸುತ್ತಿದ್ದೇನೆ. ಇದನ್ನು ಸೇವಾ ಪುಸ್ತಕದಲ್ಲಿ ಲಗತ್ತಿಸಲು ಕೋರಿರುತ್ತಾರೆ. ಶ್ರೀ ಎನ್.ನರಸಿಂಹರಾಜು ಇವರು ಶ್ರೀಮತಿ ಸರಸ್ವತಿ ತಂದೆ ಶ್ರೀ ಜೆ.ಚಂದ್ರಮೂರ್ತಿ ಇವರನ್ನು ಮದುವೆಯಾಗಿರುವುದಕ್ಕೆ ಸಾಕ್ಷಿಯಾಗಿ ಹಿಂದೂ ವಿವಾಹ ಪದ್ಧತಿ 1955 ರಂತೆ ವಿವಾಹ ನೋಂದಣಿ ಕಾಯ್ದೆ, ಜೆ.ಪಿ.ನಗರ ಇಲ್ಲಿ ದಿನಾಂಕ: 14–12–2007 ರಂದು ನೋಂದಣಿ ಮಾಡಿಸಿರುತ್ತಾರೆ. ಅದರಂತೆ ಶ್ರೀಮತಿ ಸ್ಫೂರ್ತಿ ದೇವರಾಜು ತಂದೆ ದಿ॥ ದೇವರಾಜು ಇವರನ್ನೂ ಸಹ ಸಾಕ್ಷಿಯಾಗಿ ಹಿಂದೂ ವಿವಾಹ ಪದ್ಧತಿ 1955 ರಂತೆ ವಿವಾಹ ನೋಂದಣಿ ಕಾಯ್ದೆ, ಜಯನಗರ ಇಲ್ಲಿ ದಿನಾಂಕ: 25–05–2007 ರಂದು ನೋಂದಣಿ ಮಾಡಿಸಿರುತ್ತಾರೆ.

ಸದರಿ ಪ್ರಕರಣದ ಬಗ್ಗೆ ಇಲಾಖಾ ವತಿಯಿಂದ ಜ್ಞಾಪನ ಜಾರಿ ಮಾಡಿ ಲಿಖಿತ ಸಮಜಾಯಿಷಿಯನ್ನು ಕೇಳಲಾಗಿದ್ದು ಸದರಿ ಜ್ಞಾಪನಕ್ಕೆ ಯಾವುದೇ ಉತ್ತರ ಸಲ್ಲಿಸದೇ ಇದ್ದುದರಿಂದ ಪೂರ್ವಭಾವಿ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ನಿರಂಜನ್‌ದಾಸ್ ರಾಜ್ಬಾನ್, ಜಂಟಿ ನಿರ್ದೇಶಕರು ಇವರ ನೇತೃತ್ವದಲ್ಲಿ ಶ್ರೀಮತಿ ಸಿ.ಕಮಲಾಕ್ಷಿ ಅಧ್ಯಕ್ಷರು ಇಲಾಖೆಯ ಮಹಿಳಾ ದೂರು ನಿವಾರಣಾ ಸಮಿತಿ ಮತ್ತು ಶ್ರೀ ವಿ.ಗೋಪಾಲ್, ಸಾರ್ವಜನಿಕ

ಸಂಪರ್ಕಾಧಿಕಾರಿ ಇವರನ್ನು ಒಳಗೊಂಡಂತೆ ಸಮಿತಿ ರಚಿಸಲಾಯಿತು. ಅದರಂತೆ ಸಮಿತಿಯವರು ಪೂರ್ವಭಾವಿ ಇಲಾಖಾ ವಿಚಾರಣೆ ನಡೆಸಿ ವರದಿಯನ್ನು ದಿನಾಂಕ: 12–7–2011 ರಂದು ನಿರ್ದೇಶಕರಿಗೆ ಸಲ್ಲಿಸಿರುತ್ತಾರೆ.

ಸದರಿ ವರದಿಯನ್ನು ಪರಿಶೀಲಿಸಿದಾಗ, ಶ್ರೀ ನರಸಿಂಹರಾಜುರವರು ಶ್ರೀಮತಿ ಸರಸ್ವತಿ ಹಾಗೂ ಶ್ರೀಮತಿ ಸ್ಫೂರ್ತಿ, ಇಬ್ಬರನ್ನೂ ಮದುವೆಯಾಗಿ, ಮದುವೆ ನೋಂದಣಿ ಕಛೇರಿಯಲ್ಲಿ ಎರಡೂ ವಿವಾಹವನ್ನು ನೋಂದಾಯಿಸಿರುವುದು ಕಂಡು ಬಂದಿರುತ್ತದೆ ಹಾಗೂ ಇಬ್ಬರ ಹೆಸರನ್ನೂ ನಾಮ ನಿರ್ದೇಶನ ಮಾಡಿರುವುದು ಅದರ ಪ್ರತಿಗಳ ಮೂಲಕ ತಿಳಿದು ಬಂದಿರುತ್ತದೆ. ಇದು ಕಾನೂನು ಬಾಹಿರವೆಂದು ಸ್ಪಷ್ಟಪಡಿಸುತ್ತದೆಯೆಂದು ವರದಿಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸರ್ಕಾರಿ ಸೇವೆಯಲ್ಲಿದ್ದು, ದ್ವಿ ಪತ್ನಿ ಹೊಂದಿರುವ ಆರೋಪಕ್ಕೆ ಗುರಿಯಾಗಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966 ರ ನಿಯಮ 3(1) ರ ಉಪನಿಯಮ (i) (ii) (iii) ಮತ್ತು ನಿಯಮ '28' ಅನ್ನು ಉಲ್ಲಂಘಿಸಿರುತ್ತಾರೆಂದು ಉಲ್ಲೇಖ(3)ರ ಪತ್ರದಲ್ಲಿ ಸದರಿಯವರಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಲಾಗಿತ್ತು. ವಿವರಣೆ ಸಲ್ಲಿಸಲು 15 ದಿನಗಳು ಕಾಲಾವಕಾಶ ನೀಡಲಾಗಿತ್ತು.

ಆದರೆ ಯಾವುದೇ ವಿವರಣೆ ಸಲ್ಲಿಸದ ಸದರಿಯವರ ವಿರುದ್ಧದ ಆಪಾದನೆಗಳ ಬಗ್ಗೆ ಸತ್ಯಸತ್ಯತೆಯನ್ನು ತಿಳಿಯಲು ಪೂರ್ಣವಧಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಉಲ್ಲೇಖ(5) ದಿ:04–03–2013ರಲ್ಲಿನ ಆದೇಶದಲ್ಲಿ ಶ್ರೀ ಎಂ.ಜಿ.ಹಿರೇಮಠ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಯಿತು. ಅದರಂತೆ ಸದರಿ ವಿಚಾರಣಾಧೀಕಾರಿಗಳು ವಿಚಾರಣೆ ನಡೆಸಿ ವರದಿಯನ್ನು ದಿ:07–03–2014ರಂದು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವರದಿಯನ್ನು ಪರೀಶಿಲಿಸಲಾಗಿ ಆಪಾದಿತರ ವಿರುದ್ಧ ಮಾಡಿದ ಆರೋಪವು ಸಾಬಿತಾಗಿರುತ್ತದೆ, ಎಂದು ನಿರ್ಣಯಿಸಿ ವರದಿಯಲ್ಲಿ ತಿಳಿಸಿರುತ್ತಾರೆ. ಸದರಿ ವರದಿಯನ್ನು 2ನೇ ಕಾರಣ ಕೇಳುವ ನೋಟಿಸ್ ಮೂಲಕ ದಿ: 11–03–2014 ರಂದು ಆಪಾದಿತರಿಗೆ ಜಾರಿ ಮಾಡಿ, ನೋಟಿಸು ತಲುಪಿದ 30 ದಿವಸಗಳೊಳಗಾಗಿ ಅವರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸುವಂತೆ, ತಪ್ಪಿದ್ದಲ್ಲಿ ಅವರು ಹೇಳುವುದು ಏನೂ ಇಲ್ಲವೆಂದು ಭಾವಿಸಿ ಏಕಪಕ್ಷೀಯವಾಗಿ ನಿಯಮಾವಳಿಯ ಪ್ರಕಾರ ವಿಚಾರಣಾ ವರದಿಯನ್ನು ಅಂಗೀಕರಿಸಿ ಮುಂದಿನ ಶಿಸ್ತುಕ್ರಮ ಜರುಗಿಸಲಾಗುವುದು ಎಂದು ತಿಳಿಸಲಾಗಿತ್ತು. ವರದಿಯನ್ನು ಸ್ವೀಕರಿಸಿಕೊಂಡು 2ನೇ ಕಾರಣ ಕೇಳುವ ನೋಟಿಸಿಗೆ ಅವಧಿ ಮುಗಿದರೂ ಸಹ ಅವರಿಂದ ಯಾವುದೇ ಲಿಖಿತ ಸಮಜಾಯಿಷಿ ಸಲ್ಲಿಸದೇ ಕರ್ತವ್ಯ ನಿರ್ಲಕ್ಷತೆ ತೋರಿ ಸರ್ಕಾರಿ ನಿಯಮಗಳನ್ನು ಉಲ್ಲಂಘಿಸಿದ ಆರೋಪದ ಮೇರೆಗೆ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವಿಚಾರಣಾ ವರದಿಯನ್ನು ಅಂಗೀಕರಿಸಿ ಕರ್ನಾಟಕ ಸರ್ಕಾರಿ ಸೇವಾ [ವರ್ಗೀಕರಣ ನಿಯಂತ್ರಣ ಹಾಗೂ ಮೇಲ್ಮನವಿ] ನಿಯಮಾವಳಿ 1957 ರ ನಿಯಮ 8[vi] ರಂತೆ ಕೆಸಿಎಸ್ (ನಡತೆ) ನಿಯಮಗಳು. 1966ರ ಉಪಬಂಧಗಳನ್ನು ಉಲ್ಲಂಘಿಸಿ ಎರಡನೇ ಮದುವೆ ಮಾಡಿಕೊಳ್ಳುವುದು ನಿಯಾಮಾವಳಿಗಳ ವಿರುದ್ಧವಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಡಿಟಿಇ 3 ಡಿಇಕ್ಯೂ(2)2011, ದಿನಾಂಕ: 26.09.2014**

ಸರ್ಕಾರಿ ಚಲನಚಿತ್ರ ಮತ್ತು ದೂರದರ್ಶನ ಸಂಸ್ಥೆ, ಹೆಸರಘಟ್ಟ, ಬೆಂಗಳೂರು ಇಲ್ಲಿ ಗ್ರೂಪ್ 'ಡಿ' ನೌಕರರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎನ್.ನರಸಿಂಹರಾಜು ಇವರು ಸರ್ಕಾರಿ ನಿಯಮಗಳನ್ನು ಉಲ್ಲಂಘಿಸಿದ ಆರೋಪದ ಮೇರೆಗೆ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ವಿಚಾರಣಾ ವರದಿಯನ್ನು ಅಂಗೀಕರಿಸಿ ಕರ್ನಾಟಕ ಸರ್ಕಾರಿ ಸೇವಾ [ವರ್ಗೀಕರಣ ನಿಯಂತ್ರಣ ಹಾಗೂ ಮೇಲ್ಮನವಿ] ನಿಯಮಾವಳಿ 1957 ರ ನಿಯಮ 8[vi] ರಂತೆ ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ : 18 ಸೆಇವಿ: 2001, ದಿ:11–09–2001, ಕ್ರ.ಸಂ.22ರಲ್ಲಿಂತೆ ಕೆಸಿಎಸ್ (ನಡತೆ) ನಿಯಮಗಳು. 1966ರ ಉಪಬಂಧಗಳನ್ನು ಉಲ್ಲಂಘಿಸಿ ಎರಡನೇ ಮದುವೆ ಮಾಡಿಕೊಳ್ಳುವುದು ನಿಯಾಮಾವಳಿಗಳ ವಿರುದ್ಧವಾಗಿರುವುದರಿಂದ ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ **ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ** ಆದೇಶಿಸಲಾಗಿದೆ.

**P.R. 836**
**SC-10**

**ನಿರ್ದೇಶಕರು**
ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ
ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಕುಕ 48 ಪಿಐಎಂ 2014, ಬೆಂಗಳೂರು, ದಿನಾಂಕ: 10ನೇ ನವೆಂಬರ್, 2014**

ಆಯುಷ್ ಇಲಾಖೆಯ ಹಿರಿಯ ವೈದ್ಯಾಧಿಕಾರಿ (ಆಯುರ್ವೇದ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2014ರಲ್ಲಿದ್ದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 48 ಪಿಐಎಂ 2014, ದಿನಾಂಕ: 29–01–2014ರಂದು ಪ್ರಕಟಿಸಿ, ಬಾಧಿತರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಅದರಂತೆ ಬಂದ ಆಕ್ಷೇಪಣೆಯನ್ನು ಪರಿಶೀಲಿಸಿದೆ, ತದನಂತರ ಹಿರಿಯ ವೈದ್ಯಾಧಿಕಾರಿ (ಆಯುರ್ವೇದ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2014ರಲ್ಲಿದ್ದಂತೆ ಸಿದ್ಧಪಡಿಸಿ ಅನುಬಂಧದಲ್ಲಿ ಇರುವಂತೆ **ಅಂತಿಮವಾಗಿ** ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಕಮಲಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾ.ವೈ.ಪ. ಮತ್ತು ಸಮನ್ವಯ).

## ಅಧಿಸೂಚನೆ

**ಸಂಖ್ಯೆ: ಆಕುಕ 48 ಪಿಐಎಂ 2014, ಬೆಂಗಳೂರು, ದಿನಾಂಕ: 10ನೇ ನವೆಂಬರ್, 2014**

**ದಿನಾಂಕ: 01–01–2014ರಲ್ಲಿರುವಂತೆ ಆಯುಷ್ ಇಲಾಖೆಯಲ್ಲಿನ ಹಿರಿಯ ವೈದ್ಯಾಧಿಕಾರಿ (ಆಯುರ್ವೇದ) ವೃಂದದ ಅಂತಿಮ ಜೇಷ್ಠತಾ ಪಟ್ಟಿ**

| ಕ್ರಸಂ. | ವೈದ್ಯಾಧಿಕಾರಿ ಹೆಸರು | ನೇರ ನೇಮಕಾತಿ/ ಮುಂಬಡ್ತಿ/ಇತರೆ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ ಜೇಷ್ಠತೆಗೆ ನೈಜ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಡಾ॥ ಎಸ್. ಪ್ರಮೀಳಾ | ಮುಂಬಡ್ತಿ | 08–04–65 | 20–05–96 | 23–11–2000 | 23–11–2000 | ಸರ್ಕಾರದ ಅಧಿಸೂಚನೆ ಸಂ: ಆಕುಕ/281/ಪಿಐಎಂ/, ದಿ: 14–12–04ರಲ್ಲಿ ಪೂರ್ವಾನ್ವಯವಾಗಿ ಬಡ್ತಿ ನೀಡಿರುವಂತೆ ಜೇಷ್ಠತೆ ನಿಗಧಿಪಡಿಸಿದೆ |
| 2. | ಡಾ॥ ಅನುರಾಧ ಎಲ್. ಚಂಚಲಕರ್ | ಮುಂಬಡ್ತಿ | 22–07–66 | 18–06–96 | 31–12–2000 | 31–12–2000 | |
| 3. | ಡಾ॥ ಎಂ.ಎ. ದಾಸರ್ | ಮುಂಬಡ್ತಿ | 02–10–69 | 19–11–97 | 31–07–2001 | 31–07–2001 | ಜೇಷ್ಠತಾ ಕ್ರಮಾಂಕವನ್ನು ಸರ್ಕಾರದ ಅಧಿಸೂಚನೆ ಸಂ: ಆಕುಕ/91/ಪಿಐಎಂ/05, ದಿ: 11–11–2005ರಲ್ಲಿ ನಿಗಧಿಪಡಿಸಿದ ಕ್ರಮಾಂಕದಂತೆ ಜೇಷ್ಠತೆ ನಿಗಧಿಪಡಿಸಿದೆ |
| 4. | ಡಾ॥ ಬಿ.ಎಸ್. ಸೀತಾ ಲಕ್ಷ್ಮೀ | ಮುಂಬಡ್ತಿ | 20–07–70 | 12–12–97 | 31–01–2002 | 31–01–2002 | |
| 5. | ಡಾ॥ ವಂದನಾ ಜೆ. ಗಾಳಿಯವರೆ | ಮುಂಬಡ್ತಿ | 07–07–71 | 09–01–98 | 28–02–2002 | 28–02–2002 | |
| 6. | ಡಾ॥ ಸದಾಶಿವಾನಂದ | ಮುಂಬಡ್ತಿ | 11–11–69 | 27–10–98 | 01–06–2003 | 01–06–2003 | |
| 7. | ಡಾ॥ ಎ.ಎಸ್. ಪುಷ್ಪ | ಮುಂಬಡ್ತಿ | 18–11–63 | 08–08–91 | 22–03–2006 | 22–03–2006 | ಸರ್ಕಾರದ ಅಧಿಸೂಚನೆ ಸಂ: ಆಕುಕ/417/ಪಿಐಎಂ/04, ದಿ: 17–03–2006ರಲ್ಲಿ ವೈ.ದ–1 (ಅ) ಹುದ್ದೆಗೆ ಪದೋನ್ನತಿ ನೀಡಿರುವಂತೆ ಜೇಷ್ಠತೆ ನಿಗಧಿಪಡಿಸಿದೆ |
| 8. | ಡಾ॥ ಮುರಳೀಧರ ಸಿ. | ಮುಂಬಡ್ತಿ | 22–05–55 | 06–08–79 | 18–03–2006 | 18–03–2006 | |
| 9. | ಡಾ॥ ಬಸಪ್ಪ ವಾಲೀಕರ್ | ಮುಂಬಡ್ತಿ | 24–07–61 | 02–08–93 | 27–03–2006 | 27–03–2006 | |
| 10. | ಡಾ॥ ಶಿವಾನಂದ ಹೆಚ್.ಎಸ್. | ಮುಂಬಡ್ತಿ | 10–10–70 | 24–10–98 | 21–03–2006 | 21–03–2006 | |
| 11. | ಡಾ॥ ಕೆ.ಟಿ. ಅಶ್ವಿನಿ | ಮುಂಬಡ್ತಿ | 01–06–70 | 18–10–98 | 25–03–2006 | 25–03–2006 | |
| 12. | ಡಾ॥ ವೆಂಕಟರಾಮಯ್ಯ | ಮುಂಬಡ್ತಿ | 20–05–69 | 02–11–98 | 30–09–2007 | 30–09–2007 | ಸರ್ಕಾರದ ಅಧಿಸೂಚನೆ ಸಂ: ಆಕುಕ/168/ಪಿಐಎಂ/07, ದಿ: 10–04–2008ರಲ್ಲಿ ಕ.ನಾ.ಸೇ. (ಆರ್.ಪಿಪಿ) ನಿಯಮ 2(1)(ಎ) ಅನ್ವಯ ಪೂರ್ವಾನ್ವಯವಾಗಿ ಬಡ್ತಿ ನೀಡಿರುವ ಪ್ರಯುಕ್ತ ಜೇಷ್ಠತೆ ನಿಗಧಿಪಡಿಸಿದೆ |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 13. | ಡಾ॥ ನಾಗರಾಜಪ್ಪ ಬಿ.ಕೆ. | ಮುಂಬಡ್ತಿ | 04–05–65 | 24–10–98 | 18–03–2006 | 18–03–2006 | ಸರ್ಕಾರದ ಅಧಿಸೂಚನೆ ಸಂ: ಆಕುಕ/147/ಪಿಐಎಂ/04, ದಿ: 17–03–2006ರಲ್ಲಿ ವೈ.ದ–1 (ಅ) ಹುದ್ದೆಗೆ ಪದೋನ್ನತಿ ನೀಡಿರುವಂತೆ ಜೇಷ್ಠತೆ ನಿಗಧಿಪಡಿಸಿದೆ |
| 14. | ಡಾ॥ ಕಬಾಡಿ ಗಣೇಶ ಸನಾತಮ್ | ಮುಂಬಡ್ತಿ | 17–07–69 | 25–10–98 | 17–03–2006 | 17–03–2006 | |
| 15. | ಡಾ॥ ರಾಚಯ್ಯ ಆರ್. | ಮುಂಬಡ್ತಿ | 23–07–60 | 26–10–98 | 25–03–2006 | 25–03–2006 | |
| 16. | ಡಾ॥ ಪುನೀತ್ ಬಾಬು ಪಿ. | ಮುಂಬಡ್ತಿ | 22–12–70 | 31–10–98 | 24–06–2006 | 24–06–2006 | |
| 17. | ಡಾ॥ ಮೀನಾಕ್ಷಿ ಅವರೂರು ಶಾಂತಣ್ಣ | ಮುಂಬಡ್ತಿ | 07–12–62 | 06–11–98 | 01–04–2006 | 01–04–2006 | |
| 18. | ಡಾ॥ ರೇಣುಕಾ ಯಲ್ಲಪ್ಪ ತೇರಗಾಳ | ಮುಂಬಡ್ತಿ | 01–05–71 | 19–02–99 | 01–04–2006 | 01–04–2006 | |
| 19. | ಡಾ॥ ಹೊನ್ನತ್ತಿ ಡಿ. ರಾಮರಾವ್ | ಮುಂಬಡ್ತಿ | 14–01–58 | 31–12–86 | 31–05–2007 | 31–05–2007 | ಸರ್ಕಾರದ ಅಧಿಸೂಚನೆ ಸಂ: ಆಕುಕ/125/ಪಿಐಎಂ/07, ದಿ: 10–05–2007ರಲ್ಲಿ ವೈ.ದ–1 (ಅ) ಹುದ್ದೆಗೆ ಪದೋನ್ನತಿ ನೀಡಿರುವಂತೆ ಜೇಷ್ಠತೆ ನಿಗಧಿಪಡಿಸಿದೆ |
| 20. | ಡಾ॥ ವೀರನಗೌಡ ಎಸ್. ಪಾಟೀಲ್ | ಮುಂಬಡ್ತಿ | 25–12–55 | 01–01–87 | 20–06–2007 | 20–06–2007 | |
| 21. | ಡಾ॥ ಶೋಭಾ ರಾಣಿ | ಮುಂಬಡ್ತಿ | 18–08–61 | 31–12–86 | 17–05–2007 | 17–05–2007 | |
| 22. | ಡಾ॥ ಬಸವನಗೌಡ ಜಿ. ಪಾಟೀಲ | ಮುಂಬಡ್ತಿ | 10–05–60 | 30–12–86 | 23–07–2007 | 23–07–2007 | |
| 23. | ಡಾ॥ ಮೃತ್ಯುಂಜಯ ಸ್ವಾಮಿ | ಮುಂಬಡ್ತಿ | 24–09–55 | 30–12–86 | 11–02–2008 | 11–02–2008 | ಸರ್ಕಾರದ ಅಧಿಸೂಚನೆ ಸಂ: ಆಕುಕ/331/ಪಿಐಎಂ/07, ದಿ: 03–01–2008ರಲ್ಲಿ ವೈ.ದ–1 (ಅ) ಹುದ್ದೆಗೆ ಪದೋನ್ನತಿ ನೀಡಿರುವಂತೆ ಜೇಷ್ಠತೆ ನಿಗಧಿಪಡಿಸಿದೆ |
| 24. | ಡಾ॥ ಪತ್ತರ್ ಯಮುನಪ್ಪ ಶೇಷಪ್ಪ | ಮುಂಬಡ್ತಿ | 20–07–61 | 02–01–87 | 11–02–2008 | 11–02–2008 | |
| 25. | ಡಾ॥ ಮಧುಮತಿ ಎಂ.ಎಸ್. | ಮುಂಬಡ್ತಿ | 05–08–59 | 01–01–87 | 11–01–2008 | 11–01–2008 | |
| 26. | ಡಾ॥ ಸಾಂಬ್ರೇಕರ್ ಶಾರದಾ ನಾರಾಯಣ | ಮುಂಬಡ್ತಿ | 29–11–61 | 30–12–86 | 19–01–2008 | 19–01–2008 | |
| 27. | ಡಾ॥ ಗಿರಿ ರವೀಂದ್ರ | ಮುಂಬಡ್ತಿ | 09–02–60 | 30–12–86 | 17–01–2008 | 17–01–2008 | |
| 28. | ಡಾ॥ ಮಿಟಗಾರ ಲಕ್ಷ್ಮಣ | ಮುಂಬಡ್ತಿ | 01–06–56 | 27–08–97 | 10–01–2008 | 10–01–2008 | |
| 29. | ಡಾ॥ ಅಲಕಾನಂದ ರಾವ್ ಎಂ.ಜಿ. | ಮುಂಬಡ್ತಿ | 12–04–61 | 03–01–87 | 22–01–2008 | 22–01–2008 | |
| 30. | ಡಾ॥ ಉಜ್ಜಪ್ಪ ಎಸ್. ಮಾಳಾಪುರ | ಮುಂಬಡ್ತಿ | 08–06–54 | 03–12–86 | 25–01–2008 | 25–01–2008 | |
| 31. | ಡಾ॥ ಮಹಮದ್ ಹುಸೇನ್ | ಮುಂಬಡ್ತಿ | 01–03–59 | 29–12–86 | 11–01–2008 | 11–01–2008 | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 32. | ಡಾ॥ ವಾಸುದೇವ ಕೆ. | ಮುಂಬಡ್ತಿ | 22–10–56 | 30–12–86 | 22–02–2011 | 22–02–2011 | |
| 33. | ಡಾ॥ ಸಂಗಮೇಶ್ ಎಂ. ಕಲಹಾಳ | ಮುಂಬಡ್ತಿ | 19–05–60 | 01–01–87 | 22–02–2011 | 22–02–2011 | |
| 34. | ಡಾ॥ ನಾಗೇಶ್ ಎಸ್. | ಮುಂಬಡ್ತಿ | 21–01–57 | 29–12–86 | 22–02–2011 | 22–02–2011 | |
| 35. | ಡಾ॥ ಈಶ್ವರಯ್ಯ ಎಸ್. ಈರೇಮಠ | ಮುಂಬಡ್ತಿ | 06–08–54 | 05–01–87 | 22–02–2011 | 22–02–2011 | |
| 36. | ಡಾ॥ ಗದಿಗೆಪ್ಪ ಎಂ. ಮಾಯಣ್ಣನವರ | ಮುಂಬಡ್ತಿ | 04–05–59 | 05–01–87 | 22–02–2011 | 22–02–2011 | |
| 37. | ಡಾ॥ ಗೀತಾ ಕೆ.ಎಸ್. | ಮುಂಬಡ್ತಿ | 16–04–55 | 08–01–87 | 22–02–2011 | 22–02–2011 | |
| 38. | ಡಾ॥ ಮಂಜುಳ ಎಸ್.ಎನ್. | ಮುಂಬಡ್ತಿ | 01–10–58 | 08–01–87 | 22–02–2011 | 22–02–2011 | |
| 39. | ಡಾ॥ ಪ್ರತಿಭಾ ಬಿ. | ಮುಂಬಡ್ತಿ | 28–03–56 | 09–01–87 | 22–02–2011 | 22–02–2011 | |
| 40. | ಡಾ॥ ಬಸವರಾಜಯ್ಯ ಸಿ.ಆರ್. | ಮುಂಬಡ್ತಿ | 03–12–58 | 09–01–87 | 22–02–2011 | 22–02–2011 | |
| 41. | ಡಾ॥ ಮಲ್ಲಣ್ಣ ಡಿ. ತೋಟದ್ | ಮುಂಬಡ್ತಿ | 20–01–62 | 09–01–87 | 22–02–2011 | 22–02–2011 | |
| 42. | ಡಾ॥ ಮಹೇಶ್ವರ ಎಸ್. ಗುಗ್ಗರಿ | ಮುಂಬಡ್ತಿ | 01–06–58 | 12–01–87 | 22–02–2011 | 22–02–2011 | ಸರ್ಕಾರದ ಅಧಿಸೂಚನೆ ಸಂ: ಆಕುಕ/32/ಪಿಐಎಂ/08, ದಿ: 22–02–2011ರಲ್ಲಿ ವೈ.ದ–1 (ಅ) ಹುದ್ದೆಗೆ ಪದೋನ್ನತಿ ನೀಡಿರುವಂತೆ ಜೇಷ್ಠತೆ ನಿಗಧಿಪಡಿಸಿದೆ |
| 43. | ಡಾ॥ ಸಿದ್ದೇಶ್ ಯು. | ಮುಂಬಡ್ತಿ | 09–08–59 | 13–01–87 | 22–02–2011 | 22–02–2011 | |
| 44. | ಡಾ॥ ರೂಪಾಬಾಯಿ ಕೆ. | ಮುಂಬಡ್ತಿ | 23–05–59 | 05–01–87 | 22–02–2011 | 22–02–2011 | |
| 45. | ಡಾ॥ ರಾಜೇಶ್ವರಿ ಪ್ರಸಾದ್ | ಮುಂಬಡ್ತಿ | 28–02–62 | 16–01–87 | 22–02–2011 | 22–02–2011 | |
| 46. | ಡಾ॥ ರಾಜಣ್ಣ ಬಿ. | ಮುಂಬಡ್ತಿ | 21–07–57 | 16–01–87 | 22–02–2011 | 22–02–2011 | |
| 47. | ಡಾ॥ ಗೀತಾ ಎಂ.ಆರ್. | ಮುಂಬಡ್ತಿ | 28–09–55 | 16–01–87 | 22–02–2011 | 22–02–2011 | |
| 48. | ಡಾ॥ ರವಿ ಎ.ಪಿ. | ಮುಂಬಡ್ತಿ | 08–03–54 | 16–01–87 | 22–02–2011 | 22–02–2011 | |
| 49. | ಡಾ॥ ಸುರಯ್ಯ ಖಾನಂ | ಮುಂಬಡ್ತಿ | 12–02–58 | 16–01–87 | 22–02–2011 | 22–02–2011 | |
| 50. | ಡಾ॥ ಪಂಡಿತ್ ಎಲ್.ಪಿ. | ಮುಂಬಡ್ತಿ | 02–01–58 | 19–01–87 | 22–02–2011 | 22–02–2011 | |
| 51. | ಡಾ॥ ಜವಹರಲಾಲ್ ಟಿ. ಪವಾರ್ | ಮುಂಬಡ್ತಿ | 11–12–58 | 19–01–87 | 22–02–2011 | 22–02–2011 | |
| 52. | ಡಾ॥ ರಾಮಲಿಂಗಯ್ಯ | ಮುಂಬಡ್ತಿ | 10–09–56 | 23–01–87 | 22–02–2011 | 22–02–2011 | |
| 53. | ಡಾ॥ ಮೆಹರುಬಾನು ಎ.ಎಂ. | ಮುಂಬಡ್ತಿ | 14–05–57 | 23–01–87 | 22–02–2011 | 22–02–2011 | |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 54. | ಡಾ॥ ಗೀತಾ ಎಸ್.ಪಿ. | ಮುಂಬಡ್ತಿ | 01–04–55 | 05–02–87 | 22–02–2011 | 22–02–2011 | ಸರ್ಕಾರದ ಅಧಿಸೂಚನೆ ಸಂ: ಆಕುಕ/32/ಪಿಐಎಂ/08, ದಿ: 22–02–2011ರಲ್ಲಿ ವೈ.ದ–1 (ಅ) ಹುದ್ದೆಗೆ ಪದೋನ್ನತಿ ನೀಡಿರುವಂತೆ ಜೇಷ್ಠತೆ ನಿಗಧಿಪಡಿಸಿದೆ |
| 55. | ಡಾ॥ ಸುನಂದಮ್ಮ ಎನ್.ಎಂ. | ಮುಂಬಡ್ತಿ | 10–02–60 | 11–02–87 | 22–02–2011 | 22–02–2011 | |
| 56. | ಡಾ॥ ವಿಜಯ ಕೆ. | ಮುಂಬಡ್ತಿ | 04–03–60 | 23–02–87 | 22–02–2011 | 22–02–2011 | |
| 57. | ಡಾ॥ ಶೋಭಾ ಹೆಬ್ಬಾರ್ | ಮುಂಬಡ್ತಿ | 09–02–60 | 05–03–87 | 22–02–2011 | 22–02–2011 | |
| 58. | ಡಾ॥ ನಾಗರತ್ನ ಬಿ.ಪಿ. | ಮುಂಬಡ್ತಿ | 21–06–61 | 05–03–87 | 22–02–2011 | 22–02–2011 | |
| 59. | ಡಾ॥ ವಾಹಿನಿ ರಾಮಚಂದ್ರನಾಯಕ್ | ಮುಂಬಡ್ತಿ | 15–03–62 | 24–04–87 | 22–02–2011 | 22–02–2011 | |
| 60. | ಡಾ॥ ಸುರೇಶ್ ಎಂ. ಬಿರಾದಾರ್ | ಮುಂಬಡ್ತಿ | 22–07–59 | 15–06–87 | 10–09–2012 | 10–09–2012 | ಸರ್ಕಾರದ ಅಧಿಸೂಚನೆ ಸಂ: ಆಕುಕ/604/ಪಿಐಎಂ/2011, ದಿ: 10–09–2012ರಲ್ಲಿ ವೈ.ದ–1 (ಅ) ಹುದ್ದೆಗೆ ಪದೋನ್ನತಿ ನೀಡಿರುವಂತೆ ಜೇಷ್ಠತೆ ನಿಗಧಿಪಡಿಸಿದೆ |
| 61. | ಡಾ॥ ಸುಮಂಗಳ ಎನ್. | ಮುಂಬಡ್ತಿ | 04–10–60 | 03–08–87 | 10–09–2012 | 10–09–2012 | |
| 62. | ಡಾ॥ ಸಜ್ಜನ್ ಕಲಕಪ್ಪಗುರಪ್ಪ | ಮುಂಬಡ್ತಿ | 01–06–57 | 23–07–87 | 10–09–2012 | 10–09–2012 | |
| 63. | ಡಾ॥ ತೋಟಾರಾಧ್ಯ | ಮುಂಬಡ್ತಿ | 18–11–54 | 16–07–87 | 10–09–2012 | 10–09–2012 | |
| 64. | ಡಾ॥ ವಿರೂಪಾಕ್ಷಯ್ಯ ಟಿ.ಎಂ. | ಮುಂಬಡ್ತಿ | 01–06–60 | 25–09–87 | 10–09–2012 | 10–09–2012 | |
| 65. | ಡಾ॥ ಸಿದ್ದರಾಮಯ್ಯ ಕೆ. ಕುರ್ತುಕೋಟಿ | ಮುಂಬಡ್ತಿ | 01–08–54 | 23–09–87 | 10–09–2012 | 10–09–2012 | |
| 66. | ಡಾ॥ ಶೇಕರ್ ಎನ್. ಬೆನ್ನೂರ್ | ಮುಂಬಡ್ತಿ | 01–06–56 | 19–09–87 | 10–09–2012 | 10–09–2012 | |
| 67. | ಡಾ॥ ರಾಮಚಂದ್ರ ಬಿ.ಹೆಚ್. | ಮುಂಬಡ್ತಿ | 03–08–60 | 04–05–91 | 10–09–2012 | 10–09–2012 | ಸರ್ಕಾರದ ಅಧಿಸೂಚನೆ ಸಂ: ಆಕುಕ/604/ಪಿಐಎಂ/2011, ದಿ: 10–09–2012ರಲ್ಲಿ ವೈ.ದ–1 (ಅ) ಹುದ್ದೆಗೆ ಪದೋನ್ನತಿ ನೀಡಿರುವಂತೆ ಜೇಷ್ಠತೆ ನಿಗಧಿಪಡಿಸಿದೆ |
| 68. | ಡಾ॥ ಅಮರಗುಂಡಪ್ಪ ಎ.ಜಿ.ಡಿ. | ಮುಂಬಡ್ತಿ | 20–03–55 | 02–05–91 | 10–09–2012 | 10–09–2012 | |
| 69. | ಡಾ॥ ವೀರಭದ್ರಪ್ಪ ಜಿ. ಮುಸರಿ | ಮುಂಬಡ್ತಿ | 01–06–56 | 06–05–91 | 10–09–2012 | 10–09–2012 | |
| 70. | ಡಾ॥ ಉಮಾಪತೆಪ್ಪ ಎಸ್. | ಮುಂಬಡ್ತಿ | 01–06–58 | 27–08–93 | 10–09–2012 | 10–09–2012 | |

**ಬಿ. ಕಮಲಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾ.ವೈ.ಪ. ಮತ್ತು ಸಮನ್ವಯ)

P.R. 853
SC 50

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ**

**IN THE COURT OF AUTHORISED OFFICER AND DEPUTY CONSERVATOR OF FORESTS, KARWAR DIVISION, KARWAR**

**ಕ್ರಸಂ:ಎ1/ಎಫ್‌ಓಸಿ/ವಿವ–27/2005–06, ಕಾರವಾರ, ದಿನಾಂಕ:17–10–2014.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

| **ಫಿರ್ಯಾದುದಾರರು:** | **ವಿರುದ್ಧ** | **ಅರ್ಜಿದಾರರು:** |
|---|---|---|
| ಪಿ.ಎಸ್.ಐ. ಚಿತ್ತಾಕುಲಾ ಚಿತ್ತಾಕುಲಾ ಪೊಲೀಸ್ ಠಾಣೆ, ತಾಲೂಕು: ಕಾರವಾರ. | | ದಿಗಂಬರ ಹರಿ ನಾಯ್ಕ<br>ಸಾ: ಅಂಗಡಿ, ತಾಲೂಕು: ಕಾರವಾರ. ಜಿಲ್ಲೆ: ಉತ್ತರಕನ್ನಡ. |
| (ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಉ.ಕನ್ನಡ ಕಾರವಾರ) | | (ಅರ್ಜಿದಾರರ ಪರವಾಗಿ ಶ್ರೀ.ಪಿ.ಜಿ ಮೊಳೇಕರ ವಕೀಲರು) |

**ಪ್ರಸ್ತಾವನೆ:**

1. ದಿನಾಂಕ: 07–12–2005 ರಂದು ಚಿತ್ತಾಕುಲಾ ಪೊಲೀಸ್ ಠಾಣೆಯ ಪಿ.ಎಸ್.ಐ. ಶ್ರೀ. ಶಂಕರ ಯಾಧಗುಡೇ ಇವರು ತಮ್ಮ ಠಾಣೆಯ ಸಿಬ್ಬಂದಿಯವರಾದ ಪಿ.ಸಿ.–1129, 805, ಹೆಚ್.ಸಿ–1037, ಜೀಪ ಚಾಲಕ–1217 ಸೇರಿಕೊಂಡು ಪೊಲೀಸ್ ವಾಹನ ಸಂಖ್ಯೆ: ಕೆಎ–30/ಜಿ–84 ರ ಮೂಲಕ ಠಾಣಾ ಗುನ್ನೆ ನಂಬರ 87/05 ನೇದರ ತನಿಖೆಗೆ ಕಣಸಗೇರಿ–ಮುಡಗೇರಿ ಕಡೆಗೆ ಹೋಗುತ್ತಿದ್ದಾಗ ಹೊಸಾಳಿ ಕ್ರಾಸ್ ಹತ್ತಿರ ತಲುಪಿದಾಗ ಒಬ್ಬ ರಿಕ್ಷಾ ಚಾಲಕನು ಪೊಲೀಸ್ ಜೀಪನ್ನು ನೋಡಿ ಮುಡಗೇರಿ ಕಡೆಯಿಂದ ಸದಾಶಿವಗಡ ಕಡೆಗೆ ವೇಗವಾಗಿ ಚಲಾಯಿಸಿಕೊಂಡು ಹೋಗುತ್ತಿರುವುದನ್ನು ಗಮನಿಸಿ, ಸಂಶಯದ ಮೇಲೆ ರಿಕ್ಷಾವನ್ನು ನಿಲ್ಲಿಸಿ ತಪಾಸಣೆ ಮಾಡಲಾಗಿ ರಿಕ್ಷಾದಲ್ಲಿ ಕಟ್ಟಿಗೆ ತುಂಡುಗಳು ಇದ್ದದ್ದನ್ನು ನೋಡಿ ಕೂಡಲೇ ಸ್ಥಳದಲ್ಲಿ ಇಬ್ಬರು ಪಂಚರನ್ನು ಬರಮಾಡಿಕೊಂಡು ಪಂಚರ ಸಮಕ್ಷಮ ರಿಕ್ಷಾವನ್ನು ಪರಿಶೀಲಿಸಲಾಗಿ, ಸದರ ರಿಕ್ಷಾದ ನೋಂದಣಿ ಸಂಖ್ಯೆಯು ಕೆಎ–30/4178 ಇದ್ದು ಅದರೊಳಗೆ ಸಾಗವಾನಿ ಕೊರೆದ 03ತುಂಡುಗಳು ಕಂಡು ಬಂದಿರುತ್ತದೆ. ರಿಕ್ಷಾ ಚಾಲಕನ ಹೆಸರು ಕೇಳಲಾಗಿ ದಿಗಂಬರ ಹರಿ ನಾಯ್ಕ, ಸಾ: ಅಂಗಡಿ ಎಂದು ತಿಳಿಸಿದ್ದು ಈತನ ಜೊತೆಗಿದ್ದ ಇಬ್ಬರ ಹೆಸರು ಕೇಳಲಾಗಿ, ಒಬ್ಬನು ಆಗ್ನೇಲ್ ಮತ್ತೊಬ್ಬನು ದೇವಿದಾಸ ಸಾ ಅಂಗಡಿ ಎಂದು ಹೇಳಿದರು. ಈ ಮೂರು ಜನರನ್ನು ವಶಕ್ಕೆ ತೆಗೆದುಕೊಂಡು ಆರೋಪಿತರ ವಾಹನದಲ್ಲಿರುವ ಸಾಗ 03 ತುಂಡುಗಳನ್ನು ಮತ್ತು ಆಟೋ ರಿಕ್ಷಾವನ್ನು ಪಂಚರ ಸಮಕ್ಷಮ ಪಂಚನಾಮೆಯಿಂದ ಜಪ್ತಪಡಿಸಿ ಪ್ರಥಮ ಮಾಹಿತಿ ವರದಿ ಸಂಖ್ಯೆ: 89/7–12–2005 ರಂತೆ ಅರಣ್ಯ ಗುನ್ನೆ ದಾಖಲಿಸಿಕೊಂಡಿದ್ದು ಇರುತ್ತದೆ. ಆರೋಪಿಗಳನ್ನು ಘನ ನ್ಯಾಯಾಲಯಕ್ಕೆ ಹಾಜರುಪಡಿಸಿ, ಆಟೋ ರಿಕ್ಷಾ ಹಾಗೂ ಸಾಗವಾನಿ ಕೊರೆದ ತುಂಡುಗಳನ್ನು ಪ್ರಥಮ ಮಾಹಿತಿ ವರದಿ, ಪಂಚನಾಮೆ ಮತ್ತು ಸೀಜರ್ ರಿಪೋರ್ಟದೊಂದಿಗೆ ಈ ನ್ಯಾಯಾಲಯಕ್ಕೆ ದಿನಾಂಕ: 26–12–2005 ರಂದು ಪಿ.ಎಸ್.ಐ. ಚಿತ್ತಾಕುಲಾ ಇವರು ಹಾಜರುಪಡಿಸಿದ್ದು ಇರುತ್ತದೆ. ಸದರ ಅರಣ್ಯ ಗುನ್ನೆ ಪ್ರಕರಣವನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71A ಪ್ರಕಾರ ಕ್ರಮ ಜರುಗಿಸಲು ಸೂಕ್ತವೆಂದು ಈ ನ್ಯಾಯಾಲಯಕ್ಕೆ ಕಂಡು ಬಂದಿದ್ದರಿಂದ ಸದರ ರಿಕ್ಷಾ ವಾಹನ ಹಾಗೂ 03 ಸಾಗವಾನಿ ಕೊರೆದ ತುಂಡುಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಗುನ್ನೆ ಪ್ರಕರಣದ ಆರೋಪಿತರು ಮತ್ತು ವಾಹನ ಮಾಲೀಕರಾದ ಶ್ರೀ. ದಿಗಂಬರ ಹರಿ ನಾಯ್ಕ, ಸಾ: ಅಂಗಡಿ ಇವರು ಈ ನ್ಯಾಯಾಲಯಕ್ಕೆ ಅವರ ಪರ ವಕೀಲರ ಮುಖಾಂತರ ಅರ್ಜಿ ಸಲ್ಲಿಸಿ ವಾಹನವನ್ನು ಮಧ್ಯಂತರ ತಾಬಾ ಬಿಡುಗಡೆಗೊಳಿಸಲು ದಿನಾಂಕ: 24–12–2005 ರಂದು ಮನವಿ ಮಾಡಿಕೊಂಡಿದ್ದು ಇರುತ್ತದೆ.

3. ಈ ನ್ಯಾಯಾಲಯ ಆದೇಶ ದಿನಾಂಕ: 09–10–2006 ರ ಪ್ರಕಾರ ಅರ್ಜಿದಾರರ ಮನವಿಯನ್ನು ತಿರಸ್ಕರಿಸಿ ಜಪ್ತ ಆಟೋ ರಿಕ್ಷಾ ವಾಹನ ಸಂಖ್ಯೆ: ಕೆಎ–30/4178ನೇದನ್ನು ಅರ್ಜಿದಾರರಿಗೆ ಮಧ್ಯಂತರ ತಾಬಾ ಬಿಡುಗಡೆಗೊಳಿಸಲು ಅವರ ಮನವಿಯನ್ನು ತಿರಸ್ಕರಿಸಿ ಆದೇಶ ಮಾಡಿದ್ದು ಇರುತ್ತದೆ.

4. ಅರ್ಜಿದಾರರು ಈ ನ್ಯಾಯಾಲಯದ ಆದೇಶದ ವಿರುದ್ಧ ಮಾನ್ಯ ಜಿಲ್ಲಾ ಸೆಶನ್ ನ್ಯಾಯಾಲಯ ಕಾರವಾರದಲ್ಲಿ ಸದರ ವಾಹನವನ್ನು ತಾತ್ಕಾಲಿಕ ಬಿಡುಗಡೆಗೊಳಿಸಲು ಮನವಿ ಮಾಡಿಕೊಂಡಂತೆ ಮಾನ್ಯ ಜಿಲ್ಲಾ ಸೆಶನ್ ನ್ಯಾಯಾಲಯ, ಕಾರವಾರ ರವರ C.A. No: 176/2006, ದಿನಾಂಕ: 24–07–2007 ರಂತೆ ಅರ್ಜಿದಾರರಿಗೆ ರೂ. 30000.00 ಬ್ಯಾಂಕ್ ಗ್ಯಾರಂಟಿಯನ್ನು ನೀಡಿ ಹಾಗೂ ಇನ್ನಿತರೇ ಶರತ್ತುಗಳಿಗೊಳಪಟ್ಟು ಜಪ್ತ ವಾಹನವನ್ನು ತಾತ್ಕಾಲಿಕ ಬಿಡುಗಡೆಗೆ ಆದೇಶ ಮಾಡಿದ್ದು ಇರುತ್ತದೆ. ಆದರೆ, ಅರ್ಜಿದಾರರು ಈ ನ್ಯಾಯಾಲಯಕ್ಕೆ ಮಾನ್ಯ ಜಿಲ್ಲಾ ಸೆಶನ್ ನ್ಯಾಯಾಲಯದ ಆದೇಶಾನುಸಾರ ಬ್ಯಾಂಕ್ ಗ್ಯಾರಂಟಿ ವಗೈರೆ ನೀಡಿ ಜಪ್ತ ವಾಹನವನ್ನು ಬಿಡುಗಡೆಗೊಳಿಸಿಕೊಂಡಿದ್ದು ಇರುವುದಿಲ್ಲ.

5. ಈ ಪ್ರಕರಣದ ವಿಚಾರಣೆಗಾಗಿ ವಾಹನ ಮಾಲೀಕರಿಗೆ ಈ ನ್ಯಾಯಾಲಯದಿಂದ ದಿನಾಂಕ: 17–01–2014, 31–01–2014, 27–06–2014, 25–07–2014 ಮತ್ತು 01–08–2014ರಂದು ಹಾಜರಾಗಲು ಮತ್ತು ಅವರ ಪರ ವಕಾಲತ್ ವಹಿಸಿದ ನ್ಯಾಯವಾದಿಗಳಿಗೂ ನೋಟೀಸು ಜಾರಿ ಮಾಡಿದ್ದು ಇರುತ್ತದೆ. ಆದರೆ, ಮೇಲಿನಂತೆ ವಿಚಾರಣೆ ಕಾಲಕ್ಕೆ ವಾಹನ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಹಾಜರಾಗಿದ್ದು ಇರುವುದಿಲ್ಲ.

6. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿರುವುದಿಲ್ಲ ಹಾಗೂ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲ್ಯೂ–1 ರಿಂದ ಪಿಡಬ್ಲ್ಯೂ –2 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲ್ಯೂ –1: ಶ್ರೀ. ಶಂಕರ ಬಸಪ್ಪ ಯಾಧಗುಢೆ, ನಿವೃತ್ತ ಪಿಎಸ್.ಐ., ಸಾ: ಬೆಳಗಾವಿ.

ಪಿಡಬ್ಲ್ಯೂ –2: ಶ್ರೀ. ಮಹಮ್ಮದ ತಂದೆ ಅಬ್ದುಲ್ ಶೇಖ, ರಿಕ್ಷ ಚಾಲಕ, ಸದಾಶಿವಗಡ, ಕಾರವಾರ.

ನಿಶಾನೆ ಪಿ–1 ರಿಂದ ಪಿ–5 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ–1 : ಪಂಚನಾಮೆ

ನಿಶಾನೆ ಪಿ–2 : ಪಿಎಸ್ಐ ಚಿತ್ತಾಕುಲಾ ರವರ ವರದಿ

ನಿಶಾನೆ ಪಿ–3: ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–4&5: ವಾಹನದ ಛಾಯಾ ಚಿತ್ರ

7. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ ಕೊರೆದ 03 ತುಂಡುಗಳು ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ಹೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಆ) ಈ ಮೇಲೆ ನಮೂದಿಸಿದ ಸಾಗ ಕೊರೆದ 03 ತುಂಡುಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ಆಟೋರಿಕ್ಷಾ ವಾಹನಸಂಖ್ಯೆ: KA-30/4178 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಇ) ಈ ಗುನ್ಹೆಯನ್ನು ವಾಹನದ ಮಾಲೀಕ/ಆಪಾದಿತನು/ಅರ್ಜಿದಾರನು ವಾಹನದ ಜವಾಬ್ದಾರಿ ಹೊಂದಿದ ವ್ಯಕ್ತಿಯಾಗಿ ಗೊತ್ತಿದ್ದು ಮಾಡಿದ್ದಾರೆಯೇ? ಹಾಗೂ ಅವರು ಈ ಗುನ್ಹೆಯಲ್ಲಿ ಶಾಮೀಲಾಗಿದ್ದಾರೆಯೇ?

ಈ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) –– ಹೌದು

ಅಂಶ ನಂ. (ಆ) –– ಹೌದು

ಅಂಶ ನಂ. (ಇ) –– ಹೌದು

ಅಂಶ ನಂ. (ಈ) –– ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲ್ಯೂ –1** ನಾನು 2004 ರಿಂದ 2006ನೇ ಸಾಲಿನ ಅವಧಿಯವರೆಗೆ ಚಿತ್ತಾಕುಲಾ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ ಎಂದು ಕೆಲಸ ಮಾಡಿದ್ದೇನೆ. ದಿನಾಂಕ: 07–12–2005 ರಂದು ನಾನು ನನ್ನ ಸಿಬ್ಬಂದಿಯಾದ ಪಿ.ಸಿ ಬಕಲ್ ನಂಬರ 1129, 805 ಮತ್ತು 1037 ಹಾಗೂ ಜೀಪು ಚಾಲಕ 1297ಇವರೊಂದಿಗೆ ನಮ್ಮ ಇಲಾಖಾ ಜೀಪ ನಂಬರ ಕೆಎ–30/ಜಿ–2005 ರಲ್ಲಿ ನಮ್ಮ ಠಾಣೆಯ ಗುನ್ಹೆ ಬಗ್ಗೆ ತನಿಖೆಗೆ ಕಣಸಗಿರಿ ಮತ್ತು ಹೊಸಾಳಿ ಕಡೆಗೆ ಹೋಗುತ್ತಿದ್ದೆನು. ಹೊಸಾಳಿ ಕ್ರಾಸ್ ಹತ್ತಿರ ತಲುಪಿದಾಗ ಒಬ್ಬ ರಿಕ್ಷಾ ಚಾಲಕನು ನಮ್ಮ ವಾಹನವನ್ನು ನೋಡಿ ತನ್ನ ರಿಕ್ಷಾವನ್ನು ಮುಡಗೇರಿ ಕಡೆಯಿಂದ ಸದಾಶಿವಗಡ ಕಡೆಗೆ ಜೋರಾಗಿ ಹೋಗುತ್ತಿರುವದನ್ನು ನೋಡಿ ನಮಗೆ ಸಂಶಯ ಬಂದು ನಾವು ಅದನ್ನು ತಡೆಹಿಡಿದು ನಿಲ್ಲಿಸಿದೆವು. ಅದರಲ್ಲಿ ಒಟ್ಟೂ 3ಜನರಿದ್ದು ಚಾಲಕನ ಹೆಸರು ಕೇಳಲಾಗಿ ದಿಗಂಬರ ಹರಿ ನಾಯ್ಕ ಹಾಗೂ ಜೊತೆಗೆ ಇದ್ದವರ ಹೆಸರನ್ನು ಕೇಳಲಾಗಿ ಆಗ್ನೇಲ ಮತ್ತು ದೇವಿದಾಸ ಎಂತಾ ಹೇಳಿರುತ್ತಾರೆ. ರಿಕ್ಷಾವನ್ನು ಪರಿಶೀಲಿಸಲಾಗಿ ಅದರಲ್ಲಿ 3 ಸಾಗ ತುಂಡುಗಳು ಇದ್ದವು. ಅದಕ್ಕೆ ಅರಣ್ಯ ಇಲಾಖೆಯ ಯಾವುದೇ ಚಪ್ಪಾ ವಗೈರೆ ಇರಲಿಲ್ಲ ಕಾರಣ ಕೂಡಲೇ ಸ್ಥಳಕ್ಕೆ ಪಂಚರಾದ ಶ್ರೀ. ಮಹಮ್ಮದ ಅಲಿ ಇವರನ್ನು ಕರೆಯಿಸಿ ಸದ್ರಿ ತುಂಡುಗಳ ಬಗ್ಗೆ ಒಂದು ಪಂಚನಾಮೆಯನ್ನು ತಯಾರಿಸಿದ್ದೇನೆ. ಸದರಿ ತುಂಡುಗಳ ಬಗ್ಗೆ ರಿಕ್ಷಾದಲ್ಲಿ ಇದ್ದ ಆರೋಪಿತರನ್ನು ವಿಚಾರಿಸಿದಾಗ ತಮಗೆ ಅದನ್ನು ಸಾಗಾಟ ಮಾಡುವ ಬಗ್ಗೆ ಯಾವುದೇ ಪಾಸ್/ಪರ್ಮಿಟ್ ಇಲ್ಲ ಎಂದು ಹೇಳಿರುತ್ತಾರೆ. ಕಾರಣ, ಸದರಿ ತುಂಡುಗಳನ್ನು ಬಿನ್ ಪರವಾನಿಗೆಯಿಂದ ಸಾಗಾಟ ಮಾಡುತ್ತಿದ್ದ ಬಗ್ಗೆ ಖಾತ್ರಿಯಾಗಿದ್ದರಿಂದ ಪಂಚರ ಸಮಕ್ಷಮ ಪಂಚನಾಮೆ ತಯಾರಿಸಿ ರಿಕ್ಷಾ ಹಾಗೂ ಸಾಗ ತುಂಡುಗಳನ್ನು ಜಪ್ತಪಡಿಸಿಕೊಂಡಿದ್ದೇನೆ. ಪಂಚನಾಮೆ ಹಾಗೂ ಸಹಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–1 ಹಾಗೂ ಸಾಕ್ಷಿ ಸಹಿಯನ್ನು ನಿ.ಪಿ–1ಎ ಎಂದು ಗುರುತಿಸಲಾಯಿತು. ನಂತರ ಜಪ್ತಪಡಿಸಿದ ಮುದ್ದೆಮ್ಮಾಲು ಹಾಗೂ ಆರೋಪಿತರೊಂದಿಗೆ ಠಾಣೆಗೆ ಹಿಂದುರಿಗಿ ಸರ್ಕಾರದ ಪರವಾಗಿ ನನ್ನ ಫಿರ್ಯಾದನ್ನು ದಾಖಲಿಸಿದ್ದೇನೆ. ಹಾಗೂ ಗುನ್ಹೆ ದಾಖಲಿಸಲು ಠಾಣಾಧಿಕಾರಿಗಳಿಗೆ ಸೂಚಿಸಿದ್ದು ಅವರು ಆರೋಪಿತರಿಂದ ಪ್ರಥಮ ವರ್ತಮಾನ ವರದಿಯನ್ನು ದಾಖಲಿಸಿದ್ದಾರೆ. ಫಿರ್ಯಾದಿಯ ನಕಲನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–2 ಮತ್ತು ಸಾಕ್ಷಿ ಸಹಿಯನ್ನು 2ಎ ಮತ್ತು ಪ್ರಥಮ ವರ್ತಮಾನ ವರದಿ ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–3 ಎಂದು ಗುರುತಿಸಲಾಯಿತು. ಮುಂದಿನ ತನಿಖೆಯನ್ನು ನಮ್ಮ ಠಾಣಾ ಎಸ್.ಹೆಚ್.ಓ ರವರು ಮಾಡಿದ್ದಾರೆ. ನಾನು ಜಪ್ತಪಡಿಸಿಕೊಂಡ ವಾಹನ ಹಾಗೂ ಅದರ ಫೋಟೊ ನೋಡಿದ್ದಲ್ಲಿ ಗುರುತಿಸಿದ್ದೇನೆ. ಸಾಕ್ಷಿ ನೋಡಿ ಗುರುತಿಸಿದ ಫೋಟೊಗಳನ್ನು ನಿಶಾನೆ ಪಿ–4 ಮತ್ತು 5 ಎಂದು ಗುರುತಿಸಲಾಯಿತು. ಅರಣ್ಯ ಕಳ್ಳ ಸಾಗಾಣಿಕೆಗೆ ವಾಹನವನ್ನು ಬಳಸಿದ್ದರಿಂದ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ಪ್ರಾರ್ಥಿಸುತ್ತೇನೆ.

**ಪಾಟೀ ಸವಾಲು ವಕೀಲರವರಿಂದ**: ಅರ್ಜಿದಾರರು ಹಾಗೂ ಅವರ ಪರ ವಕೀಲರು ಮಾನ್ಯ ನ್ಯಾಯಾಲಯಕ್ಕೆ ಹಾಜರು ಇರುವುದಿಲ್ಲ. ಕಾರಣ, ಪಾಟೀ ಸವಾಲು ಇಲ್ಲಾ ಎಂದು ಪರಿಗಣಿಸಲಾಗಿದೆ.

**ಪಿಡಬ್ಲ್ಯೂ –2** ದಿನಾಂಕ: 07–10–2005 ರಂದು ಪೋಲಿಸರು ಸುಮಾರು 11.30ರ ಬೆಳಿಗ್ಗೆ ನನ್ನನ್ನು ಹಾಗೂ ಮಹಮ್ಮದ ಅಲಿ ಇವರನ್ನು ಚಿತ್ತಾಕುಲಾ ಹೊಸಾಳಿ ಕ್ರಾಸ ಹತ್ತಿರ ಕರೆಯಿಸಿದ್ದರು. ಅಲ್ಲಿ ನಾವು ಹೋದಾಗ ಒಂದು ಆಟೋ ರಿಕ್ಷಾ ನಿಂತಿದ್ದು ಅದರಲ್ಲಿ 3 ಜನ ವ್ಯಕ್ತಿಗಳು ಇದ್ದರು. ಅವರು ತಮ್ಮ

ಹೆಸರನ್ನು ದಿಗಂಬರ ಹರಿ ನಾಯ್ಕ ಚಾಲಕ ಮತ್ತು ದೇವಿದಾಸ ಮತ್ತು ಆಗ್ನೇಲ ಎಂತಾ ಹೇಳಿದರು. ಆಟೋ ರಿಕ್ಷಾ ಪರಿಶೀಲಿಸಲಾಗಿ ಅಲ್ಲಿ 3 ಸಾಗವಾನಿ ತುಂಡುಗಳು ಇದ್ದವು. ಈ ಸಾಗವಾನಿ ತುಂಡುಗಳ ಪೈಕಿ ಪಿ.ಎಸ್.ಐ ರವರು ಈ ಮೂವರ ಹತ್ತಿರ ವಿಚಾರಿಸಿದಾಗ ತಮ್ಮ ಹತ್ತಿರ ಯಾವುದೇ ಪಾಸ್/ಪರ್ಮಿಟ್ ಇಲ್ಲವೆಂದು ತಿಳಿಸಿದ್ದು ರಿಕ್ಷಾವನ್ನು ಪರಿಶೀಲಿಸಲಾಗಿ ರಿಕ್ಷಾ ನಂಬರ ಕೆಎ–30/4178 ಆಗಿದ್ದು ಪೊಲೀಸರು ರಿಕ್ಷಾ ಹಾಗೂ ಸಾಗ ತುಂಡುಗಳನ್ನು ಪಂಚನಾಮೆ ಮಾಡಿ ಜಪ್ತ ಪಡಿಸಿಕೊಂಡಿದ್ದಾರೆ. ಪಂಚನಾಮೆಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದು ಈಗಾಗಲೇ ನಿ.ಪಿ–1 ಆಗಿರುತ್ತದೆ. ಸಾಕ್ಷಿ ಸಹಿಯನ್ನು 1ಬಿ ಎಂದು ಗುರುತಿಸಲಾಯಿತು. ಜಪ್ತಪಡಿಸಿಕೊಂಡ ರಿಕ್ಷಾದ ಫೋಟೊಗಳನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–4 ಮತ್ತು 5 ಎಂದು ಗುರುತಿಸಲಾಗಿದೆ. ನಿ.ಪಿ.–1ಕ್ಕೆ ಮಹಮ್ಮದ ಅಲಿ ಸಹ ಸಹಿ ಮಾಡಿರುತ್ತಾರೆ.

**ಪಾಟೀ ಸವಾಲು ವಕೀಲರವರಿಂದ:** ಅರ್ಜಿದಾರರು ಹಾಗೂ ಅವರ ಪರ ವಕೀಲರು ಮಾನ್ಯ ನ್ಯಾಯಾಲಯಕ್ಕೆ ಹಾಜರು ಇರುವುದಿಲ್ಲ. ಕಾರಣ, ಪಾಟೀ ಸವಾಲು ಇಲ್ಲಾ ಎಂದು ಪರಿಗಣಿಸಲಾಗಿದೆ.

**ಅಂಶ ನಂ. (ಆ):**

ದಿನಾಂಕ: 07–12–2005 ರಂದು ಚಿತ್ತಾಕುಲಾ ಪೊಲೀಸ್ ಠಾಣೆಯ ಪಿ.ಎಸ್.ಐ. ಶ್ರೀ. ಶಂಕರ ಯಾಧಗುಡೇ ಇವರು ತಮ್ಮ ಠಾಣೆಯ ಸಿಬ್ಬಂದಿಯವರ ಜೊತೆಗೆ ಠಾಣಾ ಗುನ್ನೆ ನಂಬರ 87/05 ನೇದರ ತನಿಖೆಗೆ ಕಣಸಗೇರಿ–ಮುಡಗೇರಿ ಕಡೆಗೆ ಹೋಗುತ್ತಿದ್ದಾಗ ಹೊಸಾಳಿ ಕ್ರಾಸ್ ಹತ್ತಿರ ತಲುಪಿದಾಗ ಒಬ್ಬ ರಿಕ್ಷಾ ಚಾಲಕನು ಪೊಲೀಸ್ ಜೀಪನ್ನು ನೋಡಿ ಮುಡಗೇರಿ ಕಡೆಯಿಂದ ಸದಾಶಿವಗಡ ಕಡೆಗೆ ವೇಗವಾಗಿ ಚಲಾಯಿಸಿಕೊಂಡು ಹೋಗಿತ್ತಿರುವದನ್ನು ಗಮನಿಸಿ, ಸಂಶಯದ ಮೇಲೆ ರಿಕ್ಷಾವನ್ನು ನಿಲ್ಲಿಸಿ ತಪಾಸಣೆ ಮಾಡಲಾಗಿ ರಿಕ್ಷಾದಲ್ಲಿ ಕಟ್ಟಿಗೆ ತುಂಡುಗಳು ಇದ್ದದ್ದನ್ನು ನೋಡಿ ಕೂಡಲೇ ಸ್ಥಳದಲ್ಲಿ ಇಬ್ಬರು ಪಂಚರನ್ನು ಬರಮಾಡಿಕೊಂಡು ಪಂಚರ ಸಮಕ್ಷಮ ರಿಕ್ಷಾವನ್ನು ಪರಿಶೀಲಿಸಲಾಗಿ, ಸದರ ರಿಕ್ಷಾದ ನೋಂದಣಿ ಸಂಖ್ಯೆಯು ಕೆಎ–30/4178 ಇದ್ದು ಅದರೊಳಗೆ ಸಾಗವಾನಿ ಕೊರೆದ 03ತುಂಡುಗಳು ಕಂಡು ಬಂದಿರುತ್ತದೆ. ರಿಕ್ಷಾ ಚಾಲಕನ ಹೆಸರು ಕೇಳಲಾಗಿ ದಿಗಂಬರ ಹರಿ ನಾಯ್ಕ, ಸಾ: ಅಂಗಡಿ ಎಂದು ತಿಳಿಸಿದ್ದು ಈತನ ಜೊತೆಗಿದ್ದ ಇಬ್ಬರ ಹೆಸರು ಕೇಳಲಾಗಿ, ಒಬ್ಬನು ಆಗ್ನೇಲ್ ಮತ್ತೊಬ್ಬನು ದೇವಿದಾಸ ಸಾ ಅಂಗಡಿ ಎಂದು ಹೇಳಿದರು. ಈ ಮೂರು ಜನರನ್ನು ವಶಕ್ಕೆ ತೆಗೆದುಕೊಂಡು ಆರೋಪಿತರ ವಾಹನದಲ್ಲಿರುವ ಸಾಗ 03 ತುಂಡುಗಳನ್ನು ಮತ್ತು ಆಟೋ ರಿಕ್ಷಾವನ್ನು ಪಂಚರ ಸಮಕ್ಷಮ ಪಂಚನಾಮೆಯಿಂದ ಜಪ್ತಪಡಿಸಿ ಪ್ರಥಮ ಮಾಹಿತಿ ವರದಿ ಸಂಖ್ಯೆ: 89/2005–06, ದಿನಾಂಕ:7–12–2005 ರಂತೆ ಅರಣ್ಯ ಗುನ್ನೆ ದಾಖಲಿಸಿಕೊಂಡಿದ್ದು ಇರುತ್ತದೆ. ಸದರ ವಾಹನವು ಗುನ್ನೆಯಲ್ಲಿ ಬಳಸಿದ ಬಗ್ಗೆ ಅದನ್ನು (ನಿ.ಪಿ– 1ರಿಂದ ನಿ.ಪಿ–5) ದಾಖಲಾಗಿದೆ. ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲ್ಯೂ –1 ಮತ್ತು ಪಿಡಬ್ಲ್ಯೂ –2** ಇವರು ನೀಡಿದ ಹೇಳಿಕೆಯು ಕೂಡ ಸದರ ಗೂಡ್ಸ ರಿಕ್ಷಾ ವಾಹನ ಮತ್ತು ಸಾಗ ತುಂಡುಗಳನ್ನು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ದಿನಾಂಕ: 07–12–2005 ರಂದು ಚಿತ್ತಾಕುಲಾ ಪೊಲೀಸ್ ಠಾಣೆಯ ಪಿ.ಎಸ್.ಐ. ಶ್ರೀ. ಶಂಕರ ಯಾಧಗುಡೇ ಇವರು ಈ ನ್ಯಾಯಾಲಯದ ಎದುರು ಹಾಜರುಪಡಿಸಿದ ವರದಿ ಹಾಗೂ ಅದರೊಂದಿಗೆ ಸಲ್ಲಿಸಿದ ಪ್ರಥಮ ಮಾಹಿತಿ ವರದಿ ಸಂಖ್ಯೆ: 89/7–12–2005 ರಂತೆ ಪಂಚನಾಮೆ, ಸೀಜರ್ ರಿಪೋರ್ಟ, ವರದಿ ಹಾಗೂ ವಾಹನದ ಛಾಯಾ ಚಿತ್ರ (**ಪಿ–1 ರಿಂದ ಪಿ–5**) ಪರಿಶೀಲಿಸಲಾಗಿದೆ. ಆರೋಪಿತ ಅರ್ಜಿದಾರ/ವಾಹನ ಮಾಲೀಕ ಸ್ವತ: ತನ್ನ ಆಟೋ ರಿಕ್ಷಾ ವಾಹನ ಸಂಖ್ಯೆ: KA-30/4178 ನೇದರಲ್ಲಿ ಅನಧಿಕೃತವಾಗಿ ಯಾವುದೇ ಪಾಸ್ ಯಾ ಪರ್ಮಿಟ್ ಅಥವಾ ತತ್ಸಂಬಂಧ ಯಾವುದೇ ಅಧಿಕೃತ ದಾಖಲೆ ಇಲ್ಲದೇ ಸಾಗ ತುಂಡುಗಳನ್ನು ಕಳ್ಳಸಾಗಾಣಿಕೆಯಿಂದ ಸಾಗಿಸುವಾಗ ಸಿಕ್ಕಿಬಿದ್ದಿರುತ್ತಾರೆ ಎಂಬುದು ಖಚಿತವಾಗುತ್ತದೆ. ಆದರೆ, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಫಿರ್ಯಾದುದಾರರು ಒದಗಿಸಿದ ದಾಖಲೆಗಳು ಅಂದರೆ ಪ್ರಥಮ ಮಾಹಿತಿ ವರದಿ, ಪಂಚನಾಮೆ ಹಾಗೂ ಸಾಕ್ಷಿ ಹೇಳಿಕೆಗಳನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರೇ ಸ್ವತ: ತಮ್ಮ ಸ್ವಂತ ಆಟೋ ರಿಕ್ಷಾ ವಾಹನ ಸಂಖ್ಯೆ: KA-30/4178 ನೇದರಲ್ಲಿ ಅನಧಿಕೃತವಾಗಿ ಪಾಸ್ ಯಾ ಪರ್ಮಿಟ್ ಇಲ್ಲದೇ ಮತ್ತು ಇಲಾಖೆಯ ಯಾವುದೇ ಛಪ್ಪಾ ಮೊಹರ್ ಇಲ್ಲದ ಸಾಗ ತುಂಡುಗಳನ್ನು ಕಳ್ಳಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿರುತ್ತಾರೆ. ಇಲ್ಲಿ ಅಪರಾಧಿಯೇ ಸ್ವತ: ಚಾಲಕ ಹಾಗೂ ವಾಹನದ ಮಾಲೀಕ ಮತ್ತು ಅರ್ಜಿದಾರ ಆಗಿದ್ದಾರೆ ಎನ್ನುವದು ದೃಢಪಟ್ಟಿದೆ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಆಟೋ ರಿಕ್ಷಾ ವಾಹನಸಂಖ್ಯೆ: KA-30/4178 ಇದು ದಿನಾಂಕ: 07–12–2005 ರಂದು ಪ್ರಥಮ ಮಾಹಿತಿ ಸಂಖ್ಯೆ: 89/2005–06, ದಿನಾಂಕ: 07–12–2005 ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸಾಗ 03 ತುಂಡುಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ

ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಆಟೋ ರಿಕ್ಷಾ ವಾಹನಸಂಖ್ಯೆ: KA-30/4178 ಮತ್ತು ಅದರಲ್ಲಿದ್ದ ಸಾಗ 03 ತುಂಡುಗಳನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

1) ನೋಂದಣಿ ಸಂಖ್ಯೆ : KA-30/4178
2) ಇಂಜಿನ್ ನಂಬರ : 24 M BFB 0 2439
3) ಚಾಸಿ ನಂಬರ : 24 F BFB 15837
4) ವಾಹನದ ಮಾದರಿ : ಆಟೋ ರಿಕ್ಷಾ (ಮೂರು ಗಾಲಿ)

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ: 17-10-2014 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಟಿ.ಹೀರಾಲಾಲ್, ಭಾ.ಅ.ಸೇ.**

**PR. 1033** ಅಧಿಕಾರಿಯುತ ಅಧಿಕಾರಿ ಹಾಗೂ

**SC. 5** ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

**IN THE COURT OF AUTHORISED OFFICER AND DEPUTY CONSERVATOR OF FORESTS, KARWAR DIVISION, KARWAR**

**ಕ್ರ.ಸಂ:ಬಿ1/ಎಫ್‌ಓಸಿ/ವಿವ-6/2009-10, ಕಾರವಾರ, ದಿನಾಂಕ: 17-10-2014.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

| **ಫಿರ್ಯಾದುದಾರರು:** | **ವಿರುದ್ಧ** | **ಅರ್ಜಿದಾರರು:** |
|---|---|---|
| ವಲಯ ಅರಣ್ಯಾಧಿಕಾರಿ, ಕಾರವಾರ | | ಅಶೋಕ ಸೈರು ನಾಯ್ಕ |
| (ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ | | ಸಾ: ಶಿರವಾಡ (ನಾರಗೇರಿ ರಸ್ತೆ), ತಾಲೂಕು: ಕಾರವಾರ. |
| ನಿರ್ದೇಶಕರು ಉ.ಕನ್ನಡ ಕಾರವಾರ) | | ಜಿಲ್ಲೆ: ಉತ್ತರಕನ್ನಡ. (ಅರ್ಜಿದಾರರ ಪರವಾಗಿ ಶ್ರೀ. ಜಿ.ಪಿ. ತಾರೀಕರ ವಕೀಲರು) |

**ಪ್ರಸ್ತಾವನೆ:**

1. ವಲಯ ಅರಣ್ಯಾಧಿಕಾರಿ, ಕಾರವಾರ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 01-01-2010 ರಂದು ವರದಿ ಸಲ್ಲಿಸುತ್ತಾ ದಿನಾಂಕ: 27-12-2009 ರಂದು ದೇವಳಮಕ್ಕಿ ಗ್ರಾಮದ ಕಾರವಾರದಿಂದ ಕೈಗಾ ಹೋಗುವ ರಸ್ತೆಯ ಶಿರ್ವೆ ಕ್ರಾಸ್ ಹತ್ತಿರ ಅಂದಾಜು ರಾತ್ರಿ 12.30 ಘಂಟೆಗೆ ಶಾಖಾ ವನಪಾಲಕ ನೈತಿ ಹಾಗೂ ಕಾಮಗಾರಿ ವನಪಾಲಕ, ಶಿರ್ವೆ ರವರು ಹಾಗೂ ಸಿಬ್ಬಂದಿ ಜನರು ಗಸ್ತು ತಿರುಗುತ್ತಿರುವಾಗ ಒಂದು ಪ್ಯಾಸೆಂಜರ್ ಆಟೋ ರಿಕ್ಷಾ ಬಂದದ್ದನ್ನು ನೋಡಿ ಕೈಸನ್ನೆ ಮಾಡಿ ನಿಲ್ಲಿಸಿ ರಿಕ್ಷಾವನ್ನು ತಪಾಸಿಸಿದಾಗ ಸದರ ರಿಕ್ಷಾ ನಂಬರ ಕೆಎ-30/8636ನೇ ನೋಂದಣಿ ಸಂಖ್ಯೆ ಇದ್ದು ಅದರ ಒಳಗಡೆ ಪರಿಶೀಲಿಸಿ ನೋಡಲಾಗಿ ಅದರಲ್ಲಿ ಕೆಲವು ಸಾಗವಾನಿ ಜಾತಿಯ ಇಲಾಖಾ ಯಾವುದೇ ಪಾಸ್/ಪರ್ಮಿಟ ಅಥವಾ ಛಾಪಾ ಇಲ್ಲದ ಕೆತ್ತಿದ ಚೌಪಾಟಿ ತುಂಡುಗಳು ಇದ್ದದ್ದು ಕಂಡು ಬಂದಿತು. ಸಿಬ್ಬಂದಿಗಳು ಸಾಗ ಚೌಪಟಿಗಳ ಬಣ್ಣ ಹಾಗೂ ವಾಸನೆಗಳ ಮೇಲಿಂದ ಅದು ಸಾಗ ಅಂತಾ ಖಾತ್ರಿ ಪಡಿಸಿಕೊಂಡು ಪಂಚರ ಸಮಕ್ಷಮ ರಿಕ್ಷಾದಲ್ಲಿ ಇದ್ದ ಸಾಗ ನಗಗಳನ್ನು ಹೊರಗೆ ತೆಗೆದು ನೋಡಿದಂತೆ ಸದರ ಸಾಗ ಚೌಪಾಟಿಗಳು ಎರಡು ಮುಖ ಖರಗಸದಿಂದ ಕೊರೆದಿದ್ದು ಇದ್ದು ನಾಲ್ಕು ಮೈ ಬಾಚಿಯಿಂದ ಕೆತ್ತಿದ್ದು ಸದರ ತುಂಡಿಗೆ ಸರ್ಕಾರಿ ನಿಶಾನಿ ಯಾ ಛಾಪಾ ಇಲ್ಲವಾದ್ದರಿಂದ ಕಳುವಿನಿಂದಲೇ ತಂದಿದ್ದು ಅಂತಾ ಅರಣ್ಯ ಸಿಬ್ಬಂದಿಗಳು ಅಭಿಪ್ರಾಯ ಪಡುತ್ತಾ ಸದರ ಚೌಪಾಟಿಗಳನ್ನು ಅರಣ್ಯ ಸಿಬ್ಬಂದಿಯವರ ಸಮಕ್ಷಮ ಅಳತೆ ಮಾಡಲಾಗಿ ಅದು ಸಾಗ ಚೌಪಾಟಿ 12=0.360 ಘ.ಮೀ. ಎಂದು ತಿಳಿದು ಬಂದಿತು. ಸದರ ಮ್ಹಾಲನ್ನು ಅನಧಿಕೃತವಾಗಿ ಸಾಗಾಣಿಕೆ ಮಾಡುತ್ತಿರುವದನ್ನು ದೃಢಪಡಿಸಿಕೊಂಡು ಶಾಖಾವನಪಾಲಕ, ನೈತಿಸಾವರ ರವರು ಪ್ರಥಮ ವರ್ತಮಾನ ವರದಿ ಸಂಖ್ಯೆ: 2/2009-10, ದಿನಾಂಕ: 27-12-2009 ರಂತೆ ಮೊಕದ್ದಮೆ ದಾಖಲಿಸಿ ಆರೋಪಿ ನಾಪತ್ತೆಯಾಗಿರುವದರಿಂದ ಜಪ್ತಪಡಿಸಲಾದ ಸಾಗ ಚೌಪಾಟಿ ನಗಗಳು 12=0.360 ಘ.ಮೀ. ಮತ್ತು ವಾಹನವನ್ನು ಪ್ರಥಮ ಮಾಹಿತಿ ವರದಿ ಸಂಖ್ಯೆ: 02/2009-10 ದಿನಾಂಕ: 27-12-2009ರಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24,50, 62, 71A, 80, 104D ಮತ್ತು ಕರ್ನಾಟಕ ಅರಣ್ಯ ನಿಯಮ 1969ರ ನಿಯಮ 144ರ ನೇರ ಉಲ್ಲಂಘನೆಯಾಗಿದ್ದು, ನಿಯಮ 165 ಹಾಗೂ ಭಾರತೀಯ ದಂಡ ಸಂಹಿತಿ 34ರ ಅಡಿ ಶಿಕ್ಷಾರ್ಹ ಅಪರಾಧವಾಗಿರುತ್ತದೆ. ಜಪ್ತ ವಾಹನ ಮತ್ತು ಮ್ಹಾಲನ್ನು ಪಂಚನಾಮೆ, ಸೀಜರ್ ರಿಪೋರ್ಟ ಮತ್ತು ಪ್ರಥಮ ಮಾಹಿತಿ ವರದಿ ಜೊತೆಗೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಖಾತ್ರಿಪಡಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ: 08-01-2010 ರಂದು ಸದರ ಜಪ್ತಪಡಿಸಿದ ವಾಹನ ಮತ್ತು ಸಾಗ ಚೌಪಾಟಿ ತುಂಡುಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಪ್ತ ವಾಹನದ ಕುರಿತು ಈ ಪ್ರಾಧಿಕಾರವು ದಿನಾಂಕ: 03-07-2010 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರಿಗೆ ಪತ್ರ ಬರೆದು ಪ್ಯಾಸೆಂಜರ್ ರಿಕ್ಷಾ ಕೆಎ-30/8636 ನೇದರ ವಾಹನದ ಮಾಲೀಕತ್ವದ ವಿಳಾಸವನ್ನು ಒದಗಿಸಲು ತಿಳಿಸಲಾಗಿ, ಈ ಕುರಿತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರ ವರದಿ ದಿನಾಂಕ: 06-07-2010 ರಂತೆ ಸದರ ವಾಹನದ ಮಾಲೀಕರಾದ ಶ್ರೀ. ಅಶೋಕ ಎಸ್. ನಾಯ್ಕ, ಶಿರವಾಡಾ, ನಾರಗೇರಿ, ಕಾರವಾರ ಇವರಾಗಿದ್ದು ಸದರಿಯವರು ದಿನಾಂಕ: 28-03-2010 ರಂದು ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ವಕಾಲತ್ ಅರ್ಜಿಯನ್ನು ಸಲ್ಲಿಸಿರುತ್ತಾರೆ.

3. ಈ ಪ್ರಕರಣದ ವಿಚಾರಣೆಗಾಗಿ ವಾಹನ ಮಾಲೀಕರಿಗೆ ಈ ನ್ಯಾಯಾಲಯದಿಂದ ದಿನಾಂಕ: 31–08–2010, 09–09–2010, 23–09–2010, 20–10–2010, 08–11–2013, 21–11–2013, 06–12–2013, 20–12–2013, 17–01–2014, 31–1–2014, 27–06–2014, 04–07–2014, 25–07–2014 ಮತ್ತು 01–08–2014ರಂದು ಹಾಜರಾಗಲು ಮತ್ತು ಅವರ ಪರ ವಕಾಲತ್ ವಹಿಸಿದ ನ್ಯಾಯವಾದಿಗಳಿಗೂ ನೋಟೀಸು ಜಾರಿ ಮಾಡಿದ್ದು ಇರುತ್ತದೆ. ಆದರೆ, ವಾಹನ ಮಾಲೀಕರು ಮತ್ತು ಅವರ ಪರವಾಗಿ ವಕೀಲರು ದಿನಾಂಕ: 31–08–2010, 09–09–2010 ಮತ್ತು 31–01–2014 ರಂದು ವಿಚಾರಣೆ ಕಾಲಕ್ಕೆ ಮಾತ್ರ ಹಾಜರಾಗಿದ್ದು, ನಂತರದ ಮೇಲಿನಂತೆ ವಿಚಾರಣೆ ಕಾಲಕ್ಕೆ ವಾಹನ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಹಾಜರಾಗಿದ್ದು ಇರುವದಿಲ್ಲ.

4. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಹಾಗೂ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲ್ಯೂ –1 ರಿಂದ ಪಿಡಬ್ಲ್ಯೂ –4 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲ್ಯೂ –1: ಶ್ರೀ. ಉಲ್ಲಾಸ ಸುಬ್ರಾಯ ತಳೇಕರ, ಉಪ ವಲಯ ಅರಣ್ಯಾಧಿಕಾರಿ, ಶಹರ ಠಾಣೆ.

ಪಿಡಬ್ಲ್ಯೂ –2: ಶ್ರೀ. ರತ್ನಾಕರ ವಿ. ತಳೇಕರ, ಉಪ ವಲಯ ಅರಣ್ಯಾಧಿಕಾರಿ, ಕೆರವಡಿ

ಪಿಡಬ್ಲ್ಯೂ –3: ಶ್ರೀ. ಬಾಳಾ ಥಾಕು ಗೌಡ, ಕಾವಲುಗಾರ, ಶಿರ್ವೆ.

ಪಿಡಬ್ಲ್ಯೂ –4: ಶ್ರೀ. ಯಶ್ವಂತ ನಾರಾಯಣ ರಾಣೆ (ಆಗಿನ ವಲಯ ಅರಣ್ಯಾಧಿಕಾರಿ),
ನಿವೃತ್ತ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಸದಾಶಿವಗಡ, ಕಾರವಾರ.

ನಿಶಾನೆ ಪಿ–1 ರಿಂದ ಪಿ–6 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ–1 : ಪಂಚನಾಮೆ

ನಿಶಾನೆ ಪಿ–2&3 : ವಾಹನದ ಛಾಯಾ ಚಿತ್ರ

ನಿಶಾನೆ ಪಿ–4: ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–5: ಸೀಜರ್ ರಿಪೋರ್ಟ

ನಿಶಾನೆ ಪಿ–6: ವಿಚಾರಣಾ ವರದಿ

5. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ ಚೌಪಾಟಿ ನಗಗಳು 12=0.360 ಘ.ಮೀ. ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಆ) ಈ ಮೇಲೆ ನಮೂದಿಸಿದ ಸಾಗ ಕೊರೆದ ನಗಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ಪಾಸೆಂಜರ್ ರಿಕ್ಷಾ ವಾಹನಸಂಖ್ಯೆ: KA-30/8636 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಇ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) –– ಹೌದು

ಅಂಶ ನಂ. (ಆ) –– ಹೌದು

ಅಂಶ ನಂ. (ಇ) –– ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲ್ಯೂ –1** ದಿನಾಂಕ: 27–12–2009 ರಂದು ರಾತ್ರಿ ನಾನು ಕಾಮಗಾರಿ ವನಪಾಲಕರಾದ ಆರ್.ವಿ. ತಳೇಕರ ಹಾಗೂ ಅರಣ್ಯ ರಕ್ಷಕರಾದ ಆರ್.ಎಂ. ನಾಯ್ಕ ಇವರು ಸೇರಿ ಶಿರ್ವೆ ಜಂಗಲ ಕಡೆಯಿಂದ ದೇವಳಮಕ್ಕಿ ಕಡೆಗೆ ಬರುವಾಗ, ಆ ಸಮಯಕ್ಕೆ ನಗೆಕೊವೆ ಕಡೆಯಿಂದ ಕೆರವಡಿ ಕಡೆಗೆ ಹೋಗಲು ಒಂದು ಪ್ಯಾಸೆಂಜರ ರಿಕ್ಷಾ ಬಂದಿತು. ಸಂಶಯದ ಮೇಲೆ ನಾನು ಕೈಸನ್ನೆ ಮಾಡಿ ಅದನ್ನು ನಿಲ್ಲಿಸುವಂತೆ ಸೂಚನೆ ಕೊಟ್ಟೆನು ಹಾಗೂ ಕೈಲಿದ್ದ ಬ್ಯಾಟರಿಯಿಂದ ಬೆಳಕನ್ನು ಬಿಟ್ಟೆನು. ನಂತರ ರಿಕ್ಷಾವನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ ಅದರಲ್ಲಿದ್ದ 2 ಜನರು ಅರಣ್ಯದ ಕಡೆಗೆ ಓಡಿ ಹೋಗಿದ್ದು ನನಗೆ ಕಾಣಿಸಿತು. ನಾವು ರಿಕ್ಷಾದ ಬಳಿ ಹೋಗಿ ಪರಿಶೀಲಿಸಿದಾಗ ಅದರಲ್ಲಿ ಸಾಗವಾನಿ ಜಾತಿಯ ಕೆತ್ತನೆ ಮಾಡಿದ ತುಂಡುಗಳು ಕಂಡು ಬಂದಿದ್ದು ಈ ಕುರಿತು ನಾನು ಅರಣ್ಯ ರಕ್ಷಕರಾದ ಆರ್.ಎಂ. ನಾಯ್ಕ ಇವರಿಗೆ ಕಳುಹಿಸಿ ಪಂಚರನ್ನು ಕರೆತರಲು ಸೂಚಿಸಿದಂತೆ ಅವರು ಪಂಚರಾದ ಬಾಳಾ ಠಾಕು ಗೌಡ ಹಾಗೂ ನಾರಾಯಣ ಹುವಾ ಗುನಗಿ ಇವರನ್ನು ಸ್ಥಳಕ್ಕೆ ಕರೆತಂದಿರುತ್ತಾರೆ. ಅವರ ಸಮಕ್ಷಮ ರಿಕ್ಷಾದಲ್ಲಿರುವ ಸಾಗವಾನಿ ತುಂಡುಗಳಿಗೆ ಯಾವುದೇ ಪಾಸ್/ಪರ್ಮಿಟ್ ಮತ್ತು ಛಪ್ಪಾ ವಗೈರೆ ಇಲ್ಲದೇ ಇರುವದು ಕಂಡು ಬಂದಿದ್ದು ಇವುಗಳು ಕಳುವಿನಿಂದ ಅಕ್ರಮವಾಗಿ ಸಾಗಿಸಲು ತಂದಿರುವದನ್ನು ಖಾತ್ರಿ ಮಾಡಿಕೊಂಡು ಈ ಬಗ್ಗೆ ಪ್ರಥಮ ವರ್ತಮಾನ ಗುನ್ನೆ ದಾಖಲಿಸಿ ಹಾಗೂ ಸ್ಥಳದಲ್ಲಿ ಪಂಚನಾಮೆ ಬರೆದು ಜಪ್ತ ಸಾಗ ತುಂಡು ಹಾಗೂ ರಿಕ್ಷಾವನ್ನು ವಲಯ ಕಚೇರಿಗೆ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ಸಮಕ್ಷಮ ಹಾಜರುಪಡಿಸಿರುತ್ತೇನೆ. ಪಂಚನಾಮೆ ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿಶಾನೆಪಿ–1 ಹಾಗೂ ಸಾಕ್ಷಿ ಸಹಿಯನ್ನು ನಿಶಾನೆ ನಿಪಿ1–ಎ ಎಂದು ಗುರುತಿಸಲಾಯಿತು. ಸಾಕ್ಷಿ ನೋಡಿದ 2 ಛಾಯ ಚಿತ್ರವನ್ನು ನಿಶಾನೆ ಪಿ– 2 ಮತ್ತು 3 ಎಂದು ಗುರುತಿಸಲಾಯಿತು. ಸಾಕ್ಷಿ ನೋಡಿ ಗುರುತಿಸಿದ ಪ್ರಥಮ ವರ್ತಮಾನ ವರದಿಯನ್ನು ನಿಶಾನೆ ಪಿ–4 ಮತ್ತು ಸಾಕ್ಷಿ ಸಹಿಯನ್ನು 4–ಎ ಎಂದು ಗುರುತಿಸಲಾಯಿತು. ಜಪ್ತಪಡಿಸಿದ

ಮುದ್ದೇ ಮಾಲಿನ ಬಗ್ಗೆ ಫಾರ್ಮ ನಂ. 20ನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಿದ್ದೇನೆ. ಸಾಕ್ಷಿ ನೋಡಿ ಗುರುತಿಸಿದ ಫಾರ್ಮ ನಂ 20ನ್ನು ನಿಶಾನೆ ಪಿ–5 ಎಂದು ಮತ್ತು ಸಾಕ್ಷಿ ಸಹಿಯನ್ನು 5–ಎ ಎಂದು ಗುರುತಿಸಲಾಯಿತು. ನಂತರ ಪ್ರಕರಣದ ತನಿಖೆಯನ್ನು ಕೈಗೊಂಡಿದ್ದು ಆರೋಪಿತನ ಪತ್ತೆಯಾಗಿರುವದಿಲ್ಲ. ಈ ಬಗ್ಗೆ ನಾನು ವಲಯ ಅರಣ್ಯಾಧಿಕಾರಿಗಳಿಗೆ ತಪಾಸಣಾ ವರದಿಯನ್ನು ಸಲ್ಲಿಸಿದ್ದೇನೆ. ಸಾಕ್ಷಿ ನೋಡಿ ಗುರುತಿಸಿದ ತಪಾಸಣಾ ವರದಿಯನ್ನು ನಿಶಾನೆ ಪಿ–6 ಮತ್ತು ಸಾಕ್ಷಿ ಸಹಿಯನ್ನು 6–ಎ ಎಂದು ಗುರುತಿಸಿರುತ್ತಾರೆ.

**ಪಾಟೀ ಸವಾಲು ಅರ್ಜಿದಾರರ ಪರ ಶ್ರೀ.ಜಿ.ಪಿ.ತಾರೀಕರ ವಕೀಲರವರಿಂದ:**

ಅರ್ಜಿದಾರರ ಪರ ವಕೀಲರು ದೀರ್ಘ ಪಾಟೀ ಸವಾಲು ಮಾಡಿದರೂ ಸಹ ಇವರು ಮುಖ್ಯ ವಿಚಾರಣೆಯಲ್ಲಿ ಹೇಳಿದ ವಿಷಯಗಳನ್ನು ತಿರಸ್ಕರಿಸುವಂತಹ ಯಾವುದೇ ವಿಷಯವನ್ನು ಈ ಸಾಕ್ಷಿದಾರರು ಪಾಟೀ ಸವಾಲಿನಲ್ಲಿ ಹೇಳಿದ್ದು ಇರುವದಿಲ್ಲ.

**ಪಿಡಬ್ಲ್ಯೂ –2** ನಾನು ನೈತಿ ಶಾಖಾ ವನಪಾಲಕರಾಗಿ ಕೆಲಸ ಮಾಡುತ್ತಿದ್ದು ಸದರ ಗುನ್ಹೆಯ ಸಮಯದಲ್ಲಿ ನೈತಿ ಶಾಖಾ ವನಪಾಲಕರಾಗಿ ಪಿ.ಡಬ್ಲ್ಯೂ –1 ಕೆಲಸ ಮಾಡುತ್ತಿದ್ದು ಅವರು ಸಂಶಯದಿಂದ ರಿಕ್ಷಾದ ಮೇಲೆ ಬ್ಯಾಟರಿ ಬೆಳಕನ್ನು ನೀಡಿದರು. ಅಷ್ಟರಲ್ಲಿ ದೂರದಲ್ಲಿ ರಿಕ್ಷಾ ನಿಲ್ಲಿಸಿ ರಿಕ್ಷಾದಲ್ಲಿದ್ದ ಎರಡು ಜನರು ಕಾಡಿನಲ್ಲಿ ರಾತ್ರಿ ವೇಳೆ ಓಡಿ ಹೋಗಿರುತ್ತಾರೆ. ಅವರನ್ನು ಹಿಂಬಾಲಿಸಿದರೂ ಕತ್ತಲೆಯಾಗಿರುವದರಿಂದ ಸಿಕ್ಕಿರಲಿಲ್ಲ. ಆ ನಂತರ ರಿಕ್ಷಾದ ಬಳಿ ಹೋಗಿ ಪರಿಶೀಲಿಸಿದಾಗ ಅದರಲ್ಲಿ ಸಾಗ ತುಂಡುಗಳು ಇದ್ದವು ಇವುಗಳಿಗೆ ಮಹಜರು ಮಾಡುವ ಸಲುವಾಗಿ ಅರಣ್ಯ ರಕ್ಷಕ ಎಂ.ಆರ್. ನಾಯ್ಕ ಇವರಿಗೆ ಪಂಚರಿಗೆ ಕರೆತರಲು ಕಳುಹಿಸಿ ಅವರು 2 ಜನ ಪಂಚರನ್ನು ಕರೆತಂದಿರುತ್ತಾರೆ. ನಂತರ ಪಂಚರ ಸಮಕ್ಷಮ ರಿಕ್ಷಾವನ್ನು ಪರಿಶೀಲಿಸಲಾಗಿ, ರಿಕ್ಷಾದಲ್ಲಿ 12 ಸಾಗತುಂಡುಗಳು ಇದ್ದವು ಅವುಗಳಿಗೆ ಸರ್ಕಾರಿ ಛಪ್ಪಾ ವಗೈರೆ ಮತ್ತು ಪಾಸ್/ಪರ್ಮಿಟ್ ಇಲ್ಲದೇ ಇರುವದು ಕಂಡು ಬಂದಿದ್ದು ಸದರ ತುಂಡುಗಳು ಕಳ್ಳ ಸಾಗಾಣಿಕೆಯಿಂದ ಸಾಗಿಸಲು ತಂದಿರುವದು ಖಾತ್ರಿ ಮಾಡಿಕೊಂಡೆವು. ಆ ನಂತರ ಪಂಚರ ಸಮಕ್ಷಮ ಪ್ರಥಮ ವರ್ತಮಾನ ವರದಿ ದಾಖಲಿಸಿ ಸ್ಥಳದಲ್ಲಿ ಪಂಚನಾಮೆಯನ್ನು ಬರೆದು ಜಪ್ತ ರಿಕ್ಷಾ ಮತ್ತು ಸಾಗ ತುಂಡುಗಳನ್ನು ವಲಯ ಕಚೇರಿ, ಕಾರವಾರಕ್ಕೆ ತಂದು ವಲಯ ಅರಣ್ಯಾಧಿಕಾರಿ, ಕಾರವಾರ ಇವರ ಸಮಕ್ಷಮ ಹಾಜರುಪಡಿಸಲಾಯಿತು. ಪಂಚನಾಮೆಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗೇ ನಿಶಾನೆ ಪಿ–1 ಎಂದು ಗುರುತಿಸಿದ್ದು ಹಾಗೂ ಸಾಕ್ಷಿ ಸಹಿಯನ್ನು ನಿಶಾನೆ ಪಿ1–ಬಿ ಎಂದು ಗುರುತಿಸಲಾಯಿತು. ಸಾಕ್ಷಿ ನೋಡಿದ 2 ಛಾಯ ಚಿತ್ರವನ್ನು ಈಗಾಗಲೇ ನಿಶಾನೆ ಪಿ–2 ಮತ್ತು 3 ಎಂದು ಗುರುತಿಸಿರುತ್ತಾರೆ.

**ಪಾಟೀ ಸವಾಲು ಅರ್ಜಿದಾರರ ಪರ ಶ್ರೀ.ಜಿ.ಪಿ.ತಾರೀಕರ ವಕೀಲರವರಿಂದ:**

ಅರ್ಜಿದಾರರ ಪರ ವಕೀಲರು ದೀರ್ಘ ಪಾಟೀ ಸವಾಲು ಮಾಡಿದರೂ ಸಹ ಇವರು ಮುಖ್ಯ ವಿಚಾರಣೆಯಲ್ಲಿ ಹೇಳಿದ ವಿಷಯಗಳನ್ನು ತಿರಸ್ಕರಿಸುವಂತಹ ಯಾವುದೇ ವಿಷಯವನ್ನು ಈ ಸಾಕ್ಷಿದಾರರು ಪಾಟೀ ಸವಾಲಿನಲ್ಲಿ ಹೇಳಿದ್ದು ಇರುವದಿಲ್ಲ.

**ಪಿಡಬ್ಲ್ಯೂ –3:** ನನಗೆ ಪ್ರ.ಸ. 1 ಮತ್ತು 2 ಇವರ ಪರಿಚಯ ಇರುತ್ತದೆ. ನಾನು ಶಿರ್ವೆಯಲ್ಲಿ 1993ನೇ ಸಾಲಿನಿಂದ ನೆಡುತೋಪಿನಲ್ಲಿ ವಾಚಮನ್ ಎಂತಾ ಕೆಲಸ ಮಾಡುತ್ತಿದ್ದೇನೆ. ದಿನಾಂಕ: 27–12–2009 ರಂದು ರಾತ್ರಿ 12.00 ಘಂಟೆಯ ಹೊತ್ತಿಗೆ ನಾನು ಶಿರ್ವೆಯಲ್ಲಿ ಇರುವ ನನ್ನ ಮನೆಯಲ್ಲಿ ಇದ್ದಾಗ ಅರಣ್ಯ ರಕ್ಷಕರಾದ ಶ್ರೀ. ಆರ್.ಎಂ. ನಾಯ್ಕ ರವರು ನಮ್ಮ ಮನೆಗೆ ಬಂದು ಒಂದು ರಿಕ್ಷಾದ ಮೇಲೆ ಅನಧಿಕೃತವಾಗಿ ಸಾಗಿಸಲು ತಂದಿರುವ ಸಾಗ ತುಂಡುವನ್ನು ಹಿಡಿದಿಟ್ಟ ಬಗ್ಗೆ ಮತ್ತು ಅದರ ಬಗ್ಗೆ ಪಂಚನಾಮೆ ಮಾಡುವ ಬಗ್ಗೆ ನನ್ನನ್ನು ಸ್ಥಳಕ್ಕೆ ಕರೆತರಲಾಯಿತು. ನನ್ನ ಜೊತೆಯಲ್ಲಿ ಇನ್ನೊಬ್ಬ ಪಂಚರಾದ ನಾರಾಯಣ ಹೂವಾ ಗುನಗಿ ಇತನಿಗೂ ಸಹ ಕರೆತರಲಾಯಿತು. ಪ್ರ.ಸ.1 ಮತ್ತು ಪ್ರ.ಸ.2 ಇವರು ನಮ್ಮ ಸಮಕ್ಷಮ ರಿಕ್ಷಾವನ್ನು ಪರಿಶೀಲಿಸಿದರು. ಅದರಲ್ಲಿ ಸಾಗ ತುಂಡುಗಳು ಇದ್ದಿದ್ದು ಕಂಡು ಬಂದಿತು. ನಮ್ಮ ಸಮಕ್ಷಮ ಸಾಗ ತುಂಡುಗಳನ್ನು ಪರಿಶೀಲಿಸಲಾಗಿ, ಅವುಗಳಿಗೆ ಸರ್ಕಾರಿ ಛಪ್ಪಾ ವಗೈರೆ ಇಲ್ಲದೇ ಇರುವದು ಕಂಡು ಬಂದಿರುತ್ತದೆ. ರಿಕ್ಷಾವನ್ನು ಪರಿಶೀಲಿಸಿದಾಗ ಅದರ ನಂಬರ ಕೆಎ–30/8636 ಆಗಿರುತ್ತದೆ. ರಾತ್ರಿ ವೇಳೆಯಲ್ಲಿ ಸ್ಥಳದಲ್ಲಿ ಪಂಚನಾಮೆ ಮಾಡಿದ್ದು ಇರುತ್ತದೆ. ಸಾಕ್ಷಿದಾರರು ಪಂಚನಾಮೆ ನೋಡಿ ಗುರುತಿಸಿದ್ದು ಮತ್ತು ತನ್ನ ಸಹಿಯನ್ನು ಸಾಕ್ಷಿ ನೋಡಿ ಗುರುತಿಸಿದ್ದು ನಿ.ಪಿ–1 ಮತ್ತು ಸಾಕ್ಷಿ ಸಹಿಯನ್ನು ನಿಪಿ–1ಬಿ ಎಂದು ಗುರುತಿಸಲಾಯಿತು. ರಿಕ್ಷಾದ ಫೋಟೊಗಳನ್ನು ನೋಡಿ ಸಾಕ್ಷಿ ಗುರುತಿಸಿದ್ದು ಅವುಗಳನ್ನು ಈಗಾಗಲೇ ನಿ.ಪಿ–2 ಮತ್ತು 3 ಎಂದು ಗುರುತಿಸಲಾಗಿದೆ. ನಿ.ಪಿ.–1 ರಲ್ಲಿ ನಮೂದಿಸಿದ ವಿಷಯಗಳು ಸರಿ ಇರುತ್ತವೆ. ನಿ.ಪಿ–1 ಕ್ಕೆ ನಾರಾಯಣ ಗುನಗಿ ಸಹ ಸಹಿ ಮಾಡಿರುತ್ತಾರೆ.

**ಪಾಟೀ ಸವಾಲು ಅರ್ಜಿದಾರ ಪರ ವಕೀಲರಿಂದ:**

ಅರ್ಜಿದಾರರು ಹಾಗೂ ಆತನ ವಕೀಲರನ್ನು ಕರೆಯಿಸಲಾಯಿತು. ಅರ್ಜಿದಾರರು ಹಾಗೂ ಅವರ ವಕೀಲರು ಹಾಜರು ಇರುವುದಿಲ್ಲ. ಕಾರಣ, ಪಾಟೀ ಸವಾಲು ಇಲ್ಲಾ ಎಂದು ಪರಿಗಣಿಸಲಾಯಿತು.

**ಪಿಡಬ್ಲ್ಯೂ –4:** 2008ರಿಂದ 2011ನೇ ಸಾಲಿನವರೆಗೆ ನಾನು ಕಾರವಾರ ವಲಯದ ವಲಯ ಅರಣ್ಯಾಧಿಕಾರಿಯಾಗಿ ಕೆಲಸ ಮಾಡಿದ್ದೇನೆ. ಈ ಪ್ರಕರಣದ ಮುಂದಿನ ತನಿಖೆಯನ್ನು ಶ್ರೀ. ಉಲ್ಲಾಸ ಸುಬ್ರಾಯ ತಳೇಕರ ಇವರಿಂದ ಪಡೆದುಕೊಂಡಿದ್ದೇನೆ. ಹಾಗೂ ಅವರು ಸಲ್ಲಿಸಿದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿದ್ದೇನೆ. ದಸ್ತಗಿರಿ ಮಾಡಿದ ಆರೋಪಿತರನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿದ್ದೇನೆ. ನಂತರ ನನಗೆ ಶ್ರೀ ಉಲ್ಲಾಸ ತಳೇಕರ ರವರು ಹಾಜರುಪಡಿಸಿದ ತನಿಖಾ ವರದಿ ಹಾಗೂ ಇತರ ದಾಖಲೆಗಳ ಆಧಾರದಲ್ಲಿ ಆರೋಪಿತನು ಗುನ್ಹೆ ಎಸಗಿದ ಬಗ್ಗೆ ಪುರಾವೆಯಾಗಿದ್ದರಿಂದ ಅತನ ವಿರುದ್ಧ ಮಾನ್ಯ ನ್ಯಾಯಾಲಯಕ್ಕೆ ದೋಷಾರೋಪಣ ಪಟ್ಟಿ ಸಲ್ಲಿಸಿರುತ್ತೇನೆ. ಈ ಪ್ರಕರಣದಲ್ಲಿ ಪ್ರ.ಸ.–1 ಇವರು ಜಪ್ತಪಡಿಸಿಕೊಂಡ ಆಟೋ ರಿಕ್ಷಾ ಸಂಖ್ಯೆ: ಕೆಎ–30/8636ನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಸದ್ರಿ ರಿಕ್ಷಾವು ಈಗ ಕಾರವಾರ ವಲಯ ಅರಣ್ಯಾಧಿಕಾರಿಗಳ ಕಚೇರಿ ಆವರಣದಲ್ಲಿ ಇರುತ್ತಿದ್ದು ಅದರ ಛಾಯಾಚಿತ್ರವನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದು ಈಗಾಗಲೇ ನಿ.ಪಿ–2 ಮತ್ತು 3 ಎಂದು ಗುರುತಿಸಲಾಗಿದೆ. ಈ ಪ್ರಕರಣದಲ್ಲಿ ಅರ್ಜಿದಾರನೇ ಆರೋಪಿತನಾಗಿರುತ್ತಾನೆ. ಈ ಪ್ರಕರಣದಲ್ಲಿ ಜಪ್ತಾದ ಆಟೋ ರಿಕ್ಷಾವು ಅರಣ್ಯ ಕಳ್ಳ ಸಾಗಾಣಿಕೆಗೆ ಬಳಕೆಯಾಗಿದ್ದು ಆ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕು ಎಂದು ಮಾನ್ಯ ನ್ಯಾಯಾಲಯಕ್ಕೆ ನಾನು ಪ್ರಾರ್ಥಿಸಿಕೊಳ್ಳುತ್ತೇನೆ.

**ಪಾಟೀ ಸವಾಲು ಅರ್ಜಿದಾರ ಪರ ವಕೀಲರಿಂದ:**

ಅರ್ಜಿದಾರರು ಹಾಗೂ ಆತನ ವಕೀಲರನ್ನು ಕರೆಯಿಸಲಾಯಿತು. ಅರ್ಜಿದಾರರು ಹಾಗೂ ಅವರ ವಕೀಲರು ಹಾಜರು ಇರುವುದಿಲ್ಲ. ಕಾರಣ, ಪಾಟೀ ಸವಾಲು ಇಲ್ಲಾ ಎಂದು ಪರಿಗಣಿಸಲಾಯಿತು

**ಅಂಶ ನಂ. (ಅ):**

ದಿನಾಂಕ: 27–12–2009 ರಂದು ಸಿಬ್ಬಂದಿಗಳು ರಾತ್ರಿ ಗಸ್ತು ತಿರುಗುವಾಗ ಶಿರ್ವೆ ಜಂಗಲ್‌ಕಡೆಯಿಂದ ದೇವಳಮಕ್ಕಿ ಕಡೆಗೆ ಕಾಲ್ನಡಗೆಯಿಂದ ಮುಖ್ಯ ರಸ್ತೆಗೆ ಬರುತ್ತಾ ಇರುವಾಗ ಆ ಸಮಯಕ್ಕೆ ನಗೆಕೊವೆ ಕಡೆಯಿಂದ ಕೆರವಡಿ ಕಡೆಗೆ ಹೋಗಲು ಒಂದು ಪಾಸೆಂಜರ್ ರಿಕ್ಷಾ ಬಂದಿದ್ದನ್ನು ಸಂಶಯದ ಮೇಲೆ ಸಿಬ್ಬಂದಿಗಳು ವಾಹನವನ್ನು ನಿಲ್ಲಿಸಲು ಕೈಸನ್ನೆ ಮಾಡಿ ಅದನ್ನು ನಿಲ್ಲಿಸುವಂತೆ ಸೂಚನೆ ಕೊಟ್ಟು ಸಿಬ್ಬಂದಿಗಳ ಕೈಯಲಿದ್ದ ಬ್ಯಾಟರಿಯಿಂದ ಬೆಳಕನ್ನು ರಿಕ್ಷಾದ ಕಡೆಗೆ ಹಾಯಿಸಿದಾಗ, ರಿಕ್ಷಾವನ್ನು ಸ್ವಲ್ಪ ದೂರದಲ್ಲಿ ನಿಲ್ಲಿಸಿ, ರಿಕ್ಷಾದಲ್ಲಿದ್ದ ಎರಡು ಜನರು ಪರಾರಿಯಾಗಿ ಜಂಗಲ್ ಕಡೆಗೆ ಓಡಿ ಹೋಗಿರುತ್ತಾರೆ.

ನಂತರ ಸಿಬ್ಬಂದಿಗಳು ಸದರ ರಿಕ್ಷಾ ಹತ್ತಿರ ಬಂದು ಪರಿಶೀಲಿಸಿದಾಗ ಅದರ ನೋಂದಣಿ ಸಂಖ್ಯೆ: ಕೆಎ–30/8636 ಆಗಿದ್ದು, ಅದರಲ್ಲಿ ಸಾಗ ಚೌಪಟಿಗಳು ಎರಡು ಮುಖ ಖರಗಸದಿಂದ ಕೊರೆದಿದ್ದು ಇದ್ದು ನಾಲ್ಕು ಮೈ ಬಾಚಿಯಿಂದ ಕೆತ್ತಿದ್ದು ಇರುತ್ತಿದ್ದು ಕಂಡು ಬಂದಿರುತ್ತದೆ. ಅವುಗಳಿಗೆ ಯಾವುದೇ ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೇ ಇರುವದು ಮತ್ತು ಇಲಾಖೆಯ ಯಾವುದೇ ಛಪ್ಪಾ ಮೊಹರು ವಗೈರೆ ಇಲ್ಲದೇ ಇರುವದು ಕಂಡು ಬಂದಿರುವದರಿಂದ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆಯಿಂದ ಸಾಗ ಚೌಪಾಟಿ ನಗಗಳು 12=0.360 ಘ.ಮೀ. ಮತ್ತು ಪಾಸೆಂಜರ್ ರಿಕ್ಷಾವನ್ನು ಜಪ್ತಪಡಿಸಿಕೊಂಡಿದ್ದು ಇರುತ್ತದೆ. ಸದರ ವಾಹನವು ಗುನ್ನೆಯಲ್ಲಿ ಬಳಸಿದ ಬಗ್ಗೆ ಅದನ್ನು (ನಿ.ಪಿ– 1 ರಿಂದ ನಿ.ಪಿ–6) ದಾಖಲಾಗಿದೆ. ಪಿಡಬ್ಲ್ಯೂ –1 ರ ವರಿಗೆ ಅರ್ಜಿದಾರ ಪರ ವಕೀಲರು ದೀರ್ಘ ಪಾಟೀ ಸವಾಲು ಮಾಡಿದರೂ ಸಹ ಸದರಿ ಸಾಕ್ಷಿದಾರರು ತಮ್ಮ ಮುಖ್ಯ ವಿಚಾರಣೆಯಲ್ಲಿ ಈ ಬಗ್ಗೆ ಹೇಳಿದ ಅಂಶಗಳನ್ನು ಕಡೆಗಣಿಸುವಂತಹ ಯಾವುದೇ ಸಾಕ್ಷಿಯನ್ನು ಹೇಳದೆ ಇರುವದರಿಂದ ಹಾಗೂ ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲ್ಯೂ –2 ರಿಂದ ಪಿಡಬ್ಲ್ಯೂ –4** ಇವರು ನೀಡಿದ ಹೇಳಿಕೆಯು ಕೂಡ ಸದರ ಪಾಸೆಂಜರ್ ರಿಕ್ಷಾ ವಾಹನ ಮತ್ತು ಸಾಗ ಚೌಪಾಟಿ ನಗಗಳನ್ನು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವುದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಪಾಸೆಂಜರ್ ರಿಕ್ಷಾ ವಾಹನ ಸಂಖ್ಯೆ: KA-30/8636 ಇದು ದಿನಾಂಕ: 27–12–2009 ರಂದು ಪ್ರಥಮ ಮಾಹಿತಿ ಸಂಖ್ಯೆ: 02/2009–10, ದಿನಾಂಕ: 27–12–2009 ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸಾಗ ಚೌಪಾಟಿ ನಗಗಳು 12=0.360 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವುದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71(ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಪಾಸೆಂಜರ್ ರಿಕ್ಷಾ ವಾಹನಸಂಖ್ಯೆ: KA-30/8636 ಮತ್ತು ಅದರಲ್ಲಿದ್ದ ಸಾಗ ಚೌಪಾಟಿ ನಗಗಳು 12=0.360 ಘ.ಮೀ.ನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA-30/8636 |
| 2) | ಇಂಜಿನ್ ನಂಬರ | : | AEM BRH 43235 |
| 3) | ಚಾಸಿ ನಂಬರ | : | MD-2AA 24ZZRWH 09399 |
| 4) | ವಾಹನದ ಮಾದರಿ | : | ಪಾಸೆಂಜರ್ ರಿಕ್ಷಾ (ಮೂರು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ:17–10–2014 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಟಿ.ಹೀರಾಲಾಲ್, ಭಾ.ಅ.ಸೇ.**

**PR. 1035** ಅಧಿಕಾರಿಯುತ ಅಧಿಕಾರಿ ಹಾಗೂ

**SC. 5** ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

# ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

**IN THE COURT OF AUTHORISED OFFICER AND DEPUTY CONSERVATOR OF FORESTS, KARWAR DIVISION, KARWAR**

**ಕ್ರ.ಸಂ:ಎಸ್1/ಎಫ್‌ಓಸಿ/ವಿವ–6/2007–08, ಕಾರವಾರ, ದಿನಾಂಕ:17–10–2014.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

| **ಫಿರ್ಯಾದುದಾರರು:** | **ವಿರುದ್ಧ** | **ಅರ್ಜಿದಾರರು:** |
|---|---|---|
| ವಲಯ ಅರಣ್ಯಾಧಿಕಾರಿ,ಅಂಕೋಲಾ. (ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಉ.ಕನ್ನಡ ಕಾರವಾರ) | | ಜೀವನ ಆನಂದು ನಾಯ್ಕ ಸಾ: ಕೇಣಿ, ತಾಲೂಕು: ಅಂಕೋಲಾ, ಜಿಲ್ಲೆ: ಉತ್ತರಕನ್ನಡ. (ಅರ್ಜಿದಾರರ ಪರವಾಗಿ ಶ್ರೀ. ಜಿ.ಪಿ. ತಾರೀಕರ ವಕೀಲರು) |

ಪ್ರಸ್ತಾವನೆ:

1. ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 14–08–2007 ರಂದು ವರದಿ ಸಲ್ಲಿಸುತ್ತಾ ದಿನಾಂಕ: 13–08–2007 ರಂದು ಸಾಯಂಕಾಲ 6.45 ಘಂಟೆ ಸುಮಾರಿಗೆ ಅಂಕೋಲಾ ತಾಲೂಕಿನ ಅಂಕೋಲಾ ಪಟ್ಟಣದ ಶ್ರೀ. ಶಾಂತಾದುರ್ಗಾ ದೇವಸ್ಥಾನದ ಎದುರುಗಡೆ ಕೇಣಿಯಿಂದ ಅಂಕೋಲಾ ಕಡೆ ಹಾಯ್ದು ಹೋಗಿರುವ ರಸ್ತೆಯ ಮೇಲೆ ಅನಧಿಕೃತವಾಗಿ ಸಾಗ ಚಿರಾವು ಗೂಡ್ಸ್ ರಿಕ್ಷಾ ಕೆಎ–30/7332 ನೇದರಲ್ಲಿ ಅಕ್ರಮ ಸಾಗವಾನಿ ಮಾಲನ್ನು ಸಾಗಾಣಿಕೆ ಮಾಡಲಾಗುತ್ತಿದೆ ಎಂಬ ಖಚಿತ ಮಾಹಿತಿ ಆಧರಿಸಿ, ಶಾಖಾ ವನಪಾಲಕ, ಅಂಕೋಲಾ ಹಾಗೂ ಇತರ ಸಿಬ್ಬಂದಿಗಳು ಅಂಕೋಲಾ ಪಟ್ಟಣದ ಶ್ರೀ. ಶಾಂತಾದುರ್ಗಾ ದೇವಸ್ಥಾನದ ಎದುರುಗಡೆ ಕೇಣಿಯಿಂದ ಅಂಕೋಲಾ ಕಡೆ ಹಾಯ್ದು ಹೋಗಿರುವ ರಸ್ತೆ ಮೇಲೆ ಕಾಯುತ್ತಿದ್ದಾಗ, ಸಾಯಂಕಾಲ ಸುಮಾರು 7.15 ಗಂಟೆಗೆ ಕೇಣಿಯಿಂದ ಅಂಕೋಲಾ ಕಡೆಗೆ ಬರುತ್ತಿರುವ ಕೆಎ–30/7332 ಗೂಡ್ಸ್ ರಿಕ್ಷಾವನ್ನು ಅಟಕಾಯಿಸಿ ಪರಿಶೀಲಿಸಿದಾಗ ಸದ್ರಿ ವಾಹನದಲ್ಲಿ ರಹದಾರಿ ಬಿಲ್ಲು ವಗೈರೆ ಇಲ್ಲದೇ ಇಲಾಖಾ ಛಾಪಾ ಗುರುತಿಲ್ಲದ 31 ಸಾಗ ಚಿರಾವು ನಗಗಳು 0.217 ಘ.ಮೀ.ಗಳನ್ನು ಅನಧಿಕೃತವಾಗಿ ಸಾಗಾಣಿಕೆ ಮಾಡುತ್ತಿರುವದನ್ನು ದೃಢಪಡಿಸಿಕೊಂಡು ಶಾಖಾವನಪಾಲಕ, ಅಂಕೋಲಾ ರವರು ಪ್ರಥಮ ವರ್ತಮಾನ ವರದಿ ಸಂಖ್ಯೆ: 4/2007–08, ದಿನಾಂಕ: 13–08–2007 ರಂತೆ ಮೊಕದ್ದಮೆ ದಾಖಲಿಸಿ ಆರೋಪಿಯಾದ ಜೀವನ ಆನಂದು ನಾಯ್ಕ, ಸಾ: ಕೇಣಿ ಇವನನ್ನು ಬಂಧಿಸಿ ಸ್ಥಳ ಮಹಜರನೊಂದಿಗೆ ಮುಂದಿನ ಕ್ರಮ ಜರುಗಿಸಿ ಅಮಾನತ್ ವರದಿ ಫಾರ್ಮ ನಂ. 20, ದಿನಾಂಕ: 13–08–2007ರೊಂದಿಗೆ ವಲಯ ಕಚೇರಿಗೆ ವರದಿ ಸಲ್ಲಿಸಿರುತ್ತಾರೆ. ಇನ್ನೊಬ್ಬ ಪ್ರಮುಖ ಆರೋಪಿ ಸೋಮಾ ದೇವು ಗೌಡ, ಸಾ: ಬಡಗೇರಿ, ತಾಲೂಕು: ಅಂಕೋಲಾ ಇವರು ತಲೆಮರೆಸಿಕೊಂಡಿರುವ ಬಗ್ಗೆ ವರದಿಯಲ್ಲಿ ಪ್ರಸ್ತಾಪಿಸಿರುತ್ತಾರೆ.

ಬಂಧಿಸಲ್ಪಟ್ಟ ಆರೋಪಿ ರಿಕ್ಷಾ ಚಾಲಕನನ್ನು ವಿಚಾರಣೆಗೆ ಒಳಪಡಿಸಿದಾಗ ಸಾಗ ಚಿರಾವು ನಗಗಳನ್ನು ಬಡಗೇರಿಯ ಸೋಮಾ ಗೌಡರವರ ಹೇಳಿಕೆಯ ಮೇರೆಗೆ ರಿಕ್ಷಾ ಮೂಲಕ ಸಾಗಿಸುತ್ತಿದ್ದು, ಈ ರೀತಿ ಮರದ ನಗಗಳನ್ನು ಸಾಗಿಸಲು ರಹದಾರಿ ಪರ್ಮಿಟ್ ಬೇಕಾಗುತ್ತದೆ ಎಂಬ ಅರಿವು ತನಗೆ ಇರಲಿಲ್ಲವೆಂದು ತಿಳಿಸಿರುತ್ತಾನೆ. ಅಲ್ಲದೇ ತಾನು ಗೂಡ್ಸ ರಿಕ್ಷಾ ಚಾಲನೆಯನ್ನೇ ಆಧಾರವಾಗಿಟ್ಟುಕೊಂಡು ಉಪಜೀವನ ನಡೆಸುತ್ತಿದ್ದು ಅಂಕೋಲಾ ಪಟ್ಟಣ ವ್ಯಾಪ್ತಿಯಲ್ಲಿಯೇ ಬಾಡಿಗೆಗೆ ಗೂಡ್ಸ ರಿಕ್ಷಾ ಮೂಲಕ ಸರಕು ಸಾಗಾಣಿಕೆ ಮಾಡುತ್ತಿರುವದಾಗಿ ತಿಳಿಸಿರುತ್ತಾನೆ. ಮತ್ತು ಕೇವಲ ಬಾಡಿಗೆಗೋಸ್ಕರ ಸೋಮಾ ಗೌಡರವರ ಹೇಳಿಕೆಯ ಮೇರೆಗೆ ಸದ್ರಿ ಸಾಗ ಚಿರಾವು ನಗಗಳನ್ನು ಬಡಗೇರಿಯಿಂದ ಅಂಕೋಲಾ ಪಟ್ಟಣದ ಹತ್ತಿರವಿರುವ ಅಂಬಾರಕೊಡ್ಲ ಗ್ರಾಮಕ್ಕೆ ಸಾಗಿಸುತ್ತಿರುವದಾಗಿ ತಪ್ಪೊಪ್ಪಿಕೊಂಡಿರುತ್ತಾನೆ. ಇದರಿಂದ ತಲೆಮರೆಸಿಕೊಂಡ ಆರೋಪಿ ಸೋಮಾ ಗೌಡ, ಸಾ: ಬಡಗೇರಿ ಎಂಬುವವನೇ ಸದ್ರಿ ಗುನ್ನೆಯ ಮೂಲ ಸೂತ್ರಧಾರನೆಂದು ದೃಢಪಡಿಸಿರುತ್ತಾರೆ ಮತ್ತು ಗೂಡ್ಸ್ ರಿಕ್ಷಾ ಚಾಲಕನು ಈ ಅನಧಿಕೃತ ಸಾಗಾಣಿಕೆಯಲ್ಲಿ ಯಾವುದೇ ದುರುದ್ದೇಶವನ್ನಿಟ್ಟುಕೊಂಡು ಭಾಗಿಯಾಗಿಲ್ಲವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಪ್ರಕರಣದಲ್ಲಿ ದಸ್ತಗಿರಿ ಮಾಡಲ್ಪಟ್ಟ ಆರೋಪಿಯನ್ನು ಮಾನ್ಯ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಲಾಗಿದ್ದು, ದಿನಾಂಕ: 13–08–2007ರ ಪಂಚನಾಮೆಯಂತೆ ವಶಪಡಿಸಿಕೊಂಡ ಗೂಡ್ಸ್ ರಿಕ್ಷಾ ಹಾಗೂ ಸಾಗ ನಗಗಳನ್ನು ಈ ನ್ಯಾಯಾಲಯಕ್ಕೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71ಎರಡಿಯಲ್ಲಿ ಕ್ರಮ ಜರುಗಿಸಲು ಮತ್ತು ಜಪ್ತಪಡಿಸಿರುವ ವಾಹನ ಮತ್ತು ಸಾಗ ನಗಗಳನ್ನು ಭದ್ರತೆಗಾಗಿ ಆದೇಶ ನೀಡಲು ಕೋರಿಕೊಂಡಿರುತ್ತಾರೆ. ಈ ಅರಣ್ಯ ಗುನ್ನೆ ಪ್ರಕರಣದಲ್ಲಿ ತೊಡಗಿಸಿಕೊಂಡ ವಾಹನ ಹಾಗೂ ಸಾಗ ಚಿರಾವು ನಗಗಳು 31=0.217 ಘ.ಮೀ. ಪ್ರಥಮ ಮಾಹಿತಿ ವರದಿ ಸಂಖ್ಯೆ: 04/2007–08 ದಿನಾಂಕ: 13–08–2007 ರಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24, 62, 71A, 80, 104D ಮತ್ತು ಕರ್ನಾಟಕ ಅರಣ್ಯ ನಿಯಮ 1969 ರ ನಿಯಮ144 ರ ನೇರ ಉಲ್ಲಂಘನೆಯಾಗಿದ್ದು, ನಿಯಮ 165 ಹಾಗೂ ಭಾರತೀಯ ದಂಡ ಸಂಹಿತಿ 34ರ ಅಡಿ ಶಿಕ್ಷಾರ್ಹ ಅಪರಾಧವಾಗಿರುತ್ತದೆ. ಜಪ್ತ ವಾಹನ ಮತ್ತು ಮ್ಹಾಲನ್ನು ಪಂಚನಾಮೆ, ಸೀಜರ್ ರಿಪೋರ್ಟ ಮತ್ತು ಪ್ರಥಮ ಮಾಹಿತಿ ವರದಿ ಜೊತೆಗೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಖಾತ್ರಿಪಡಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ: 16–08–2007 ರಂದು ಸದರ ಜಪ್ತಪಡಿಸಿದ ವಾಹನ ಮತ್ತು ಸಾಗ ಚಿರಾವು ನಗಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಪ್ತ ವಾಹನದ ಕುರಿತು ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರು ದಿನಾಂಕ: 14–08–2007 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರಿಗೆ ಪತ್ರ ಬರೆದು ಗೂಡ್ಸ್ ರಿಕ್ಷಾ ಕೆಎ–30/7332 ನೇದರ ವಾಹನದ ಮಾಲೀಕತ್ವದ ವಿಳಾಸವನ್ನು ಒದಗಿಸಲು ತಿಳಿಸಲಾಗಿ, ಈ ಕುರಿತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರ ವರದಿ ದಿನಾಂಕ: 16–08–2007 ರಂತೆ ಸದರ ವಾಹನದ ಮಾಲೀಕರಾದ ಶ್ರೀ. ಜೀವನ ಆನಂದು ನಾಯ್ಕ, ಸಾ: ಕೇಣಿ, ತಾಲೂಕು: ಅಂಕೋಲಾ ಇವರಾಗಿದ್ದು ಸದರಿಯವರು ದಿನಾಂಕ: 07–11–2007 ರಂದು ಅವರ ಪರವಾಗಿ ವಕೀಲರ ಮುಖಾಂತರ ವಾಹನವನ್ನು ಬಿಡುಗಡೆ ಮಾಡಲು ಕೋರಿಕೊಂಡಿದ್ದು ಇರುತ್ತದೆ. ಆದರೆ, ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 22–01–2008 ರಂದು ಅರ್ಜಿದಾರರಿಗೆ ಅರಣ್ಯಗುನ್ನೆಯಲ್ಲಿ ಜಪ್ತಪಡಿಸಿದ ಗೂಡ್ಸ್ ರಿಕ್ಷಾ ಸಂಖ್ಯೆ: ಕೆಎ–30/7332 ನೇದನ್ನು ಮಧ್ಯಂತರ ತಾಬಾಕ್ಕೆ ಬಿಡಲು ಅರ್ಜಿದಾರರ ಮನವಿಯನ್ನು ತಿರಸ್ಕರಿಸಿದ್ದು ಇರುತ್ತದೆ.

3. ಅರ್ಜಿದಾರರು ಈ ನ್ಯಾಯಾಲಯದ ಆದೇಶದ ವಿರುದ್ಧ ಮಾನ್ಯ ಜಿಲ್ಲಾ ಸೆಶನ್ ಕೋರ್ಟ, ಕಾರವಾರದಲ್ಲಿ ಮೇಲ್ಮನವಿಯನ್ನು ಸಲ್ಲಿಸಿ ವಾಹನವನ್ನು ಬಿಡುಗಡೆಗೊಳಿಸಲು ಕೋರಿಕೊಂಡಿದ್ದು ಮಾನ್ಯ ಜಿಲ್ಲಾ ಸೆಷನ್ ನ್ಯಾಯಾಲಯ, ಕಾರವಾರ ಸಿ.ಎ. ನಂ. 92/2008, ದಿನಾಂಕ: 30–09–2008 ರಂತೆ ಅರ್ಜಿದಾರರ ಮನವಿಯನ್ನು ತಿರಸ್ಕರಿಸಿ ಆದೇಶ ಮಾಡಿದ್ದು ಇರುತ್ತದೆ.

4. ಈ ಪ್ರಕರಣದ ವಿಚಾರಣೆಯನ್ನು ದಿನಾಂಕ: 22–01–2008, 17–01–2014, 31–01–2014, 04–07–2014 ಮತ್ತು 01–08–2014 ರಂದು ಈ ನ್ಯಾಯಾಲಯದಲ್ಲಿ ಇಟ್ಟುಕೊಳ್ಳಲಾಗಿದು, ಈ ಸಂಬಂಧ ವಾಹನ ಮಾಲೀಕರಾದ ಶ್ರೀ. ಜೀವನ ಆನಂದು ನಾಯ್ಕ, ಸಾ: ಕೇಣಿ, ತಾಲೂಕು: ಅಂಕೋಲಾ ಇವರಿಗೆ ಹಾಜರಾಗಲು ತಿಳಿಸಲಾಗಿ, ಸದರಿಯವರು ದಿನಾಂಕ: 17–01–2014 ಮತ್ತು 04–07–2014 ರಂದು ಈ ನ್ಯಾಯಾಲಯದಲ್ಲಿ ಹಾಜರಾಗಿರುತ್ತಾರೆ. ಮತ್ತು ಅವರ ಪರವಾಗಿ ನ್ಯಾಯವಾದಿಗಳು ದಿನಾಂಕ: 17–01–2014ರ ವಿಚಾರಣೆ ಕಾಲಕ್ಕೆ ಮಾತ್ರ ಹಾಜರಾಗಿದ್ದು ಉಳಿದಂತೆ ನೋಟೀಸು ಕಳುಹಿಸಲಾಗಿ, ಅವರು ಈ ನ್ಯಾಯಾಲಯದಲ್ಲಿ ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಇರುವದಿಲ್ಲ.

5. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರ ಪರ ವಕೀಲರು ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಇರುವದಿಲ್ಲ ಹಾಗೂ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು

ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲ್ಯೂ –1 ರಿಂದ ಪಿಡಬ್ಲ್ಯೂ –2 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲ್ಯೂ –1: ಶ್ರೀ. ವಿನಾಯಕ ಪ್ರಕಾಶ ನಾಯ್ಕ, (ಆಗಿನ ವನಪಾಲಕ) ವಲಯ ಅರಣ್ಯಾಧಿಕಾರಿ, ಸಾಮಾಜಿಕ ಅರಣ್ಯ ಸಿದ್ಧಾಪುರ.

ಪಿಡಬ್ಲ್ಯೂ –2: ಶ್ರೀ. ಶೇಖರ ಹೊನ್ನಪ್ಪ ನಾಯ್ಕ, ಅಂಕೋಲಾ.

ನಿಶಾನೆ ಪಿ–1 ರಿಂದ ಪಿ–5 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ–1: ಪಂಚನಾಮೆ

ನಿಶಾನೆ ಪಿ–2: ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–3: ಸೀಜರ್ ರಿಪೋರ್ಟ

ನಿಶಾನೆ ಪಿ–4: ವಿಚಾರಣಾ ವರದಿ

ನಿಶಾನೆ ಪಿ–5: ವಾಹನದ ಛಾಯಾ ಚಿತ್ರ

ನಿಶಾನೆ ಪಿ–6: ಗುನ್ನೆಗಾರರ/ವಾಹನ ಮಾಲೀಕನ ತಪ್ಪೊಪ್ಪಿಗೆ ಹೇಳಿಕೆ

6. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ ಕೊರೆದ ನಗಗಳು 31=0.217 ಘ.ಮೀ. ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಆ) ಈ ಮೇಲೆ ನಮೂದಿಸಿದ ಸಾಗ ಕೊರೆದ ನಗಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ಗೂಡ್ಸ್ ರಿಕ್ಷಾ ವಾಹನ ಸಂಖ್ಯೆ: KA-30/7332 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಇ) ಈ ಗುನ್ನೆಯನ್ನು ವಾಹನದ ಮಾಲೀಕ/ಆಪಾದಿತನು/ಅರ್ಜಿದಾರನು ವಾಹನದ ಜವಾಬ್ದಾರಿ ಹೊಂದಿದ ವ್ಯಕ್ತಿಯಾಗಿ ಗೊತ್ತಿದ್ದು ಮಾಡಿದ್ದಾರೆಯೇ? ಹಾಗೂ ಅವರು ಈ ಗುನ್ನೆಯಲ್ಲಿ ಶಾಮೀಲಾಗಿದ್ದಾರೆಯೇ?

ಈ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) –– ಹೌದು

ಅಂಶ ನಂ. (ಆ) –– ಹೌದು

ಅಂಶ ನಂ. (ಇ) –– ಹೌದು

ಅಂಶ ನಂ. (ಈ) –– ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲ್ಯೂ –1** ಇವರು 2006 ರಿಂದ 2012 ರ ವರೆಗೆ ನಾನು ಶಾಖಾ ವನಪಾಲಕರಾಗಿ ಅಂಕೋಲಾ ಎಂತಾ ಕೆಲಸ ನಿರ್ವಹಿಸಿರುತ್ತೇನೆ. ದಿನಾಂಕ: 13–08–2007 ರಂದು ನಾನು ಕರ್ತವ್ಯದಲ್ಲಿದ್ದಾಗ ವಲಯ ಅರಣ್ಯಾಧಿಕಾರಿಗಳಾದ ಶ್ರೀ. ಸಿ.ಜಿ. ನಾಯ್ಕ ಇವರು ರಿಕ್ಷಾದಲ್ಲಿ ಅರಣ್ಯ ಮರಗಳ ಕಳ್ಳಸಾಗಾಣಿಕೆ ಆಗುತ್ತಿದ್ದ ಬಗ್ಗೆ ಬಾತ್ಮಿ ಇದೆ ಕಾರಣ ಕೇಣಿಯಿಂದ ಅಂಕೋಲಾ ಕಡೆ ಬರುವ ರಸ್ತೆಗೆ ಹೋಗಿ ಗಸ್ತು ಮಾಡುವಂತೆ ಆದೇಶ ನೀಡಿದ್ದು ಅದೇ ಪ್ರಕಾರ ನಾನು ಶೇಖರ ನಾಯ್ಕ ಮತ್ತು ವಿನಯ್ ಪಂಥ ಹಾಗೂ ಇಲಾಖಾ ಸಿಬ್ಬಂದಿಗಳಾದ ನವೀನ ಎಂ. ಶೆಟ್ಟಿ ಮತ್ತು ಎನ್.ಕೆ. ನಾಯ್ಕ ಇವರನ್ನು ಕರೆದುಕೊಂಡು ಅಂಕೋಲಾ ಪಟ್ಟಣದ ಶ್ರೀ ಶಾಂತಾದುರ್ಗಾ ದೇವಸ್ಥಾನದ ಎದುರು ಹೋಗಿ ನಿಂತು ಗಸ್ತು ಕರ್ತವ್ಯ ನಿರ್ವಹಿಸುತ್ತಿದ್ದೇನು. ಸಾಯಂಕಾಲ ಸುಮಾರು 7.15 ಘಂಟೆಗೆ ಕೇಣಿಯಿಂದ ಅಂಕೋಲಾ ಕಡೆಗೆ ಕೆಎ–30/7332 ಎಂಬ ಸಂಖ್ಯೆಯ ಗೂಡ್ಸ ರಿಕ್ಷಾವು ಬಂದಿದ್ದು ಸಂಶಯದ ಮೇಲೆ ಕೈಸನ್ನೆ ಮಾಡಿ ನಿಲ್ಲಿಸಿದೆವು. ಸಮವಸ್ತ್ರದಲ್ಲಿದ್ದ ನಮ್ಮನ್ನು ನೋಡಿ ರಿಕ್ಷಾ ಹಿಂದುಗಡೆ ಕುಳಿತ ವ್ಯಕ್ತಿಯು ಓಡಿ ಹೋಗಿದ್ದು ಸಿಕ್ಕಿರುವದಿಲ್ಲ. ರಿಕ್ಷಾ ಚಾಲಕ ಮಾತ್ರ ಸಿಕ್ಕಿದ್ದು ಆತನ ಹಾಗೂ ಪಂಚರ ಸಮಕ್ಷಮ ರಿಕ್ಷಾದ ಹಿಂದುಗಡೆ ಪರಿಶೀಲಿಸಲಾಗಿ, ಸಾಗವಾನಿ ಜಾತಿಯ ಕೈ ಚಿರಾವು ನಗಗಳು ಇದ್ದದ್ದು ಕಂಡು ಬಂದಿತು. ಈ ಬಗ್ಗೆ ರಿಕ್ಷಾ ಚಾಲಕನನ್ನು ವಿಚಾರಿಸಲಾಗಿ ಆತ ತನ್ನ ಹೆಸರನ್ನು ಜೀವನ ಆನಂದು ನಾಯ್ಕ ಎಂದು ಮತ್ತು ಸದರಿ ಸಾಗ ನಗಗಳನ್ನು ಸಾಗಿಸಲು ತನಗೆ ಯಾವುದೇ ಪಾಸ್/ಪರ್ಮಿಟ್ ಇಲ್ಲವೆಂದು ತಿಳಿಸಿದನು. ಪರಿಶೀಲಿಸಲಾಗಿ ಅದಕ್ಕೆ ಇಲಾಖೆಯ ಯಾವುದೇ ಛಪ್ಪಾ ವಗೈರೆ ಇರಲಿಲ್ಲ. ಆತನು ಓಡಿ ಹೋದವನ ಹೆಸರು ಸೋಮಾ ಗೌಡ ಎಂದು ಹೇಳಿದ್ದು ತಾವಿಬ್ಬರೂ ಸೇರಿ ಬಡಗೇರಿಯಲ್ಲಿ ದಾಸ್ತಾನು ಇಟ್ಟ ನಗಗಳನ್ನು ತುಂಬಿಕೊಂಡು ಬಂದ ಬಗ್ಗೆ ಹೇಳಿದನು. ನಂತರ ರಿಕ್ಷಾದಲ್ಲಿದ್ದ ನಗಗಳನ್ನು ಕೆಳಗೆ ತೆಗೆದು ಪಂಚರ ಸಮಕ್ಷಮ ಅಳತೆ ಮಾಡಲಾಗಿ ಅವು ಒಟ್ಟೂ 31 ನಗಗಳು ಇದ್ದು ಒಟ್ಟೂ ಅಳತೆ 0.217 ಘ.ಮೀ. ಆಗಿತ್ತು. ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆ ಮಾಡಿ ರಿಕ್ಷಾ ಹಾಗೂ ಸಾಗವಾನಿ ನಗಗಳನ್ನು ಜಪ್ತಪಡಿಸಿಕೊಂಡಿದ್ದೇನೆ. ನಾನೇ ಪಂಚನಾಮೆ ತಯಾರಿಸಿದ್ದು ಪಂಚರು ಹಾಗೂ ಇಲಾಖಾ ಸಿಬ್ಬಂದಿಗಳು ಅದಕ್ಕೆ ಸಹಿ ಹಾಕಿರುತ್ತಾರೆ. ಸಾಕ್ಷಿ ನೋಡಿ ಗುರುತಿಸಿದ ಪಂಚನಾಮೆಯನ್ನು ನಿ.ಪಿ–1 ಎಂದು ಸಾಕ್ಷಿಯ ಸಹಿಯನ್ನು ನಿ.ಪಿ–1ಎ ಎಂದು ಗುರುತಿಸಲಾಯಿತು. ಜಪ್ತಪಡಿಸಿದ ಮುದ್ದೇಮ್ಹಾಲು ಹಾಗೂ ಪಂಚನಾಮೆಯೊಂದಿಗೆ ನಾನು ವಲಯ ಅರಣ್ಯಾಧಿಕಾರಿ, ಅಂಕೋಲಾ ರವರ ಕಚೇರಿಗೆ ಹಿಂತಿರುಗಿ ವಲಯ ಅರಣ್ಯಾಧಿಕಾರಿಗಳ ಸಮಕ್ಷಮ ಮುದ್ದೇಮ್ಹಾಲು ಹಾಗೂ ಆರೋಪಿತರನ್ನು ಹಾಜರುಪಡಿಸಿದೆನು. ಹಾಗೂ ಸರ್ಕಾರದ ಪರವಾಗಿ ಪ್ರ.ವಾ. ವರದಿಯನ್ನು ದಾಖಲಿಸಿದ್ದೇನೆ. ಸಾಕ್ಷಿ ನೋಡಿ ಗುರುತಿಸಿದ ಪ್ರ.ವಾ. ವರದಿಯನ್ನು ನಿ.ಪಿ–2 ಹಾಗೂ ಸಾಕ್ಷಿ ಸಹಿಯನ್ನು ನಿ.ಪಿ–2ಎ ಎಂದು ಗುರುತಿಸಲಾಯಿತು. ಜಪ್ತಪಡಿಸಿದ ಮ್ಹಾಲಿನ ಬಗ್ಗೆ ಜಪ್ತ ವರದಿ ತಯಾರಿಸಿದ್ದು ಸಾಕ್ಷಿ ಅದನ್ನು ನೋಡಿ ಗುರುತಿಸಿದ್ದು ಅದನ್ನು ನಿ.ಪಿ–3 ಹಾಗೂ ಸಾಕ್ಷಿ ಸಹಿಯನ್ನು ನಿ.ಪಿ–3ಎ ಎಂದು ಗುರುತಿಸಲಾಯಿತು. ದಾಖಲೆಗಳನ್ನು ವಲಯ ಅರಣ್ಯಾಧಿಕಾರಿಗಳಿಗೆ ಮುಂದಿನ ತನಿಖೆಗಾಗಿ ಹಸ್ತಾಂತರಿಸಿದ್ದು ಶ್ರೀ. ಸಿ.ಜಿ. ನಾಯ್ಕ ವಲಯ ಅರಣ್ಯಾಧಿಕಾರಿಗಳು ತನಿಖಾ ವರದಿಯನ್ನು ತಯಾರಿಸಿ, ಮಾನ್ಯ ನ್ಯಾಯಾಲಯಕ್ಕೆ

ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿದ್ದಾರೆ. ಸಿ.ಜಿ. ನಾಯ್ಕ ವಲಯ ಅರಣ್ಯಾಧಿಕಾರಿಗಳು ಪ್ರಸ್ತುತ ನ್ಯಾಯಾಂಗ ಬಂಧನದಲ್ಲಿರುತ್ತಾರೆ. ನಾನು ಅವರು ಸಲ್ಲಿಸಿದ ತನಿಖಾ ವರದಿ ನೋಡಿ ಗುರುತಿಸುತ್ತೇನೆ. ಸಾಕ್ಷಿ ನೋಡಿದ ತನಿಖಾ ವರದಿಯನ್ನು ನಿ.ಪಿ–4 ಎಂದು ಗುರುತಿಸಲಾಯಿತು. ನಾವು ಜಪ್ತುಪಡಿಸಿಕೊಂಡ ರಿಕ್ಷಾವನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಪ್ರಸ್ತುತ ರಿಕ್ಷಾವು ಕಾರವಾರ ವಲಯ ಕಚೇರಿಯ ಆವರಣದಲ್ಲಿದ್ದು ವಾಹನದ ಫೋಟೊವನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ನಿ.ಪಿ–5 ಎಂದು ಗುರುತಿಸಲಾಯಿತು. ಈ ಪ್ರಕರಣದ ಆರೋಪಿತನೇ ಅರ್ಜಿದಾರನಾಗಿದ್ದು ವಾಹನವನ್ನು ಅಕ್ರಮ ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದರಿಂದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲುಹಾಕಿಕೊಳ್ಳಲು ಕೋರಿಕೊಳ್ಳುತ್ತೇನೆ.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಆತನ ಪರ ವಕೀಲರು ಹಾಜರಿರುವದಿಲ್ಲ. ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿದೆ.

**ಪಿಡಬ್ಲ್ಯೂ–2** ಶ್ರೀ. ಶೇಖರ ಹೊನ್ನಪ್ಪ ನಾಯ್ಕ, ಅಂಕೋಲಾ ಇವರು ಹೇಳಿಕೆ ನೀಡುತ್ತಾ ಅರಣ್ಯ ಇಲಾಖೆಯವರು ದಿನಾಂಕ: 13–08–2007 ರಂದು ನನ್ನನ್ನು ಹಾಗೂ ವಿನಯ ಪಂಥ ಈತನನ್ನು ಅಂಕೋಲಾದ ಶಾಂತಾದುರ್ಗಾ ದೇವಸ್ಥಾನದ ಕಡೆಗೆ ಕರೆದುಕೊಂಡು ಹೋಗಿರುತ್ತಾರೆ. ಹಾಗೂ ಅರಣ್ಯ ಕಳ್ಳ ಸಾಗಾಣಿಕೆಯಾಗುತ್ತಿದ್ದು ಪಂಚರನ್ನಾಗಿ ಬರಲು ಕೇಳಿಕೊಂಡಿರುತ್ತಾರೆ. ಅದಕ್ಕೆ ನಾವು ಒಪ್ಪಿ ಅವರ ಜೊತೆ ನಿಂತುಕೊಂಡಿದ್ದು ಸಾಯಂಕಾಲ 7.15 ಗಂಟೆ ಸುಮಾರಿಗೆ ಕೇಣಿ ಕಡೆಯಿಂದ ಅಂಕೋಲಾ ಕಡೆಗೆ ಒಂದು ಗೂಡ್ಸ ರಿಕ್ಷಾ ಬಂದಿದ್ದು ಅರಣ್ಯ ಇಲಾಖೆ ಸಿಬ್ಬಂದಿಗಳು ಅದನ್ನು ನಿಲ್ಲಿಸಿರುತ್ತಾರೆ. ಆಗ, ಹಿಂದೆ ಕುಳಿತಿದ್ದ ಒಬ್ಬ ವ್ಯಕ್ತಿ ಓಡಿ ಹೋಗಿರುತ್ತಾನೆ. ರಿಕ್ಷಾ ನಂಬರ ಕೆಎ–30/7332 ಆಗಿದ್ದು ರಿಕ್ಷಾ ಚಾಲಕ ತನ್ನ ಹೆಸರನ್ನು ಜೀವನ ಆನಂದು ನಾಯ್ಕ ಎಂದು ಹೇಳಿರುತ್ತಾನೆ. ರಿಕ್ಷಾವನ್ನು ನಮ್ಮ ಸಮಕ್ಷಮ ಪರಿಶೀಲಿಸಲಾಗಿ ಒಟ್ಟೂ 31 ಸಾಗವಾನಿ ಕೈಚಿರಾವು ನಗಗಳಿದ್ದು ನಮ್ಮ ಸಮಕ್ಷಮ ಅಳತೆ ಮಾಡಲಾಗಿ ಅದರ ಅಳತೆ ಒಟ್ಟೂ 0.217 ಘ.ಮೀ. ಇತ್ತು. ಜೀವನ್ ಆನಂದು ನಾಯ್ಕ ಇತನು ಸದರಿ ನಗಗಳನ್ನು ಸಾಗಾಟ ಮಾಡಲು ತನ್ನಬಳಿ ಯಾವುದೇ ಪಾಸ್/ಪರ್ಮಿಟ ಇಲ್ಲವೆಂದು ಹೇಳಿದನು. ಪರಿಶೀಲಿಸಲಾಗಿ ಅದಕ್ಕೆ ಅರಣ್ಯ ಇಲಾಖೆಯ ಯಾವುದೇ ಛಪ್ಪಾ ವಗೈರೆ ಇರಲಿಲ್ಲ. ಕಾರಣ ಪ್ರ.ಸ.–1 ಇವರು ಸ್ಥಳದಲ್ಲಿ ಪಂಚನಾಮೆ ಮಾಡಿ ಸಾಗವಾನಿ ನಗಗಳನ್ನು ಹಾಗೂ ರಿಕ್ಷಾವನ್ನು ಜಪ್ತಪಡಿಸಿಕೊಂಡಿರುತ್ತಾರೆ. ಪಂಚನಾಮೆಯನ್ನು ಹಾಗೂ ವಾಹನವನ್ನು ನೋಡಿದ್ದಲ್ಲಿ ಗುರುತಿಸುತ್ತೇನೆ. ಸಾಕ್ಷಿ ಪಂಚನಾಮೆ ನೋಡಿ ಗುರುತಿಸಿದ್ದು ಅದು ಈಗಾಗಲೇ ನಿ.ಪಿ–1 ಎಂದು ಆಗಿದ್ದು, ಸಾಕ್ಷಿಯ ಸಹಿಯನ್ನು ನಿ.ಪಿ–1ಬಿ ಎಂದು ಗುರುತಿಸಲಾಯಿತು. ರಿಕ್ಷಾದ ಫೋಟೊವನ್ನು ಸಾಕ್ಷಿ ನೋಡಿ ಗುರುತಿಸಿದ್ದು, ಅದನ್ನು ಈಗಾಗಲೇ ನಿ.ಪಿ–5 ಎಂದು ಗುರುತಿಸಲಾಗಿದೆ. ನನ್ನ ಜೊತೆ ವಿನಯ್ ಹಾಗೂ ಉಳಿದ ಅರಣ್ಯ ಇಲಾಖೆಯ ಸಿಬ್ಬಂದಿಗಳು ನಿ.ಪಿ–1ಕ್ಕೆ ಸಹಿ ಮಾಡಿರುತ್ತಾರೆ.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಆತನ ಪರ ವಕೀಲರು ಹಾಜರಿರುವದಿಲ್ಲ. ಕಾರಣ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿದೆ.

**ಅಂಶ ನಂ. (ಆ):**

ಗೂಡ್ಸ ರಿಕ್ಷಾ ವಾಹನ ಸಂಖ್ಯೆ: KA-30/7332 ಇದರಲ್ಲಿ ದಿನಾಂಕ: 13–08–2007 ರಂದು ಸಾಯಂಕಾಲ ಸುಮಾರು 7.15 ಘಂಟೆಗೆ ಕೇಣಿ ರಸ್ತೆಯಿಂದ ಅಂಕೋಲಾ ಕಡೆಗೆ ಶ್ರೀ. ಶಾಂತಾದುರ್ಗಾ ದೇವಸ್ಥಾನದ ಸಮೀಪ ಇಲಾಖಾ ಸಿಬ್ಬಂದಿಗಳು ಸಂಶಯದಿಂದ ವಾಹನವನ್ನು ನಿಲ್ಲಿಸಲು ಕೈಸನ್ನೆ ಮಾಡಿ ನಿಲ್ಲಿಸಿದಂತೆ, ಸದರ ರಿಕ್ಷಾದಲ್ಲಿ ಹಿಂಬದಿಗೆ ಕೊರೆದ ಸಾಗ ತುಂಡುಗಳು ಇದ್ದದ್ದು ಅವುಗಳಿಗೆ ಯಾವುದೇ ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೇ ಇರುವದು ಮತ್ತು ಇಲಾಖೆಯ ಯಾವುದೇ ಛಪ್ಪಾ ಮೊಹರು ವಗೈರೆ ಇಲ್ಲದೇ ಇರುವದರಿಂದ ಅನಧಿಕೃತವಾಗಿ ಗೂಡ್ಸ ರಿಕ್ಷಾದಲ್ಲಿ ಸಾಗವಾನಿ ಕೊರೆದ ನಗಗಳು 31=0.217 ಘ.ಮೀ. ಸಾಗಿಸುವಾಗ ಗೂಡ್ಸ ರಿಕ್ಷಾ ಮತ್ತು ಸಾಗ ನಗಗಳು ಸ್ಥಳದಲಿ ಪಂಚನಾಮೆಯಿಂದ ಪಂಚರ ಸಮಕ್ಷಮ ಜಪ್ತಪಡಿಸಿಕೊಂಡಿದ್ದು ಇರುತ್ತದೆ. ಮತ್ತು ಸದರ ವಾಹನದ ಚಾಲಕರಾದ ಶ್ರೀ. ಜೀವನ ಆನಂದು ನಾಯ್ಕ, ಸಾ: ಕೇಣಿ ಯವರು ಸ್ವತ: ಮಾಲೀಕರಾಗಿದ್ದು ಮತ್ತು ಸದರ ವಾಹನವು ಗುನ್ನೆಯಲ್ಲಿ ಬಳಸಿದ ಬಗ್ಗೆ ಅದನ್ನು (ನಿ.ಪಿ– 1ರಿಂದ ನಿ.ಪಿ–5) ದಾಖಲಾಗಿದೆ. ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲ್ಯೂ –1 ಪಿಡಬ್ಲ್ಯೂ –2** ಇವರು ನೀಡಿದ ಹೇಳಿಕೆಯು ಕೂಡ ಸದರ ಗೂಡ್ಸ ರಿಕ್ಷಾ ವಾಹನ ಮತ್ತು ಸಾಗ ತುಂಡುಗಳನ್ನು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ದಿನಾಂಕ: 14–08–2007 ರಂದು ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರು ಈ ನ್ಯಾಯಾಲಯದ ಎದುರು ಹಾಜರುಪಡಿಸಿದ ವರದಿ ಹಾಗೂ ಅದರೊಂದಿಗೆ ಸಲ್ಲಿಸಿದ ಪ್ರಥಮ ಮಾಹಿತಿ ವರದಿ ಸಂಖ್ಯೆ: 4/2007–08, ದಿನಾಂಕ: 13–08–2007 ಪಂಚನಾಮೆ, ಸೀಜರ್ ರಿಪೋರ್ಟ್, ವಿಚಾರಣಾ ವರದಿ ಹಾಗೂ ವಾಹನದ ಛಾಯಾ ಚಿತ್ರ **(ಪಿ–1 ರಿಂದ ಪಿ–5)** ಅಲ್ಲದೇ ಆರೋಪಿಗಳು ನೀಡಿದ ತಪ್ಪೊಪ್ಪಿಗೆ ಹೇಳಿಕೆ **(ಪಿ–6)** ಇವುಗಳನ್ನೆಲ್ಲ ಪರಿಶೀಲಿಸಲಾಗಿದೆ. ಆರೋಪಿತ ಅರ್ಜಿದಾರನು ಸ್ವತ: ತನ್ನ ಗೂಡ್ಸ ರಿಕ್ಷಾ ವಾಹನ ಸಂಖ್ಯೆ: KA-30/7332 ನೇದರಲ್ಲಿ ಅನಧಿಕೃತವಾಗಿ ಯಾವುದೇ ಪಾಸ್ ಯಾ ಪರ್ಮಿಟ್ ಅಥವಾ ತತ್ಸಂಬಂಧ ಯಾವುದೇ ಅಧಿಕೃತ ದಾಖಲೆ ಇಲ್ಲದೇ ಕಳ್ಳಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿರುತ್ತಾರೆ ಎಂಬುದು ಖಚಿತವಾಗುತ್ತದೆ. ಈ ರೀತಿ ಅರಣ್ಯಗುನ್ನೆಯಲ್ಲಿ ಸಿಕ್ಕಿಬಿದ್ದಾಗ ನೀಡಿರುವ ಲಿಖಿತ ತಪ್ಪೊಪ್ಪಿಗೆ ಪತ್ರದಲ್ಲಿ ತಾನು ಸಾಗ ಕೊರೆದ ನಗಗಳ ಕಳ್ಳ ಸಾಗಾಣಿಕೆ ಮಾಡಿದ್ದು ನಿಜವಿರುವದಾಗಿ ಒಪ್ಪಿಕೊಂಡಿದ್ದಾನೆ. ಆದರೆ, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಫಿರ್ಯಾದುದಾರರು ಒದಗಿಸಿದ ದಾಖಲೆಗಳು ಅಂದರೆ ಪ್ರಥಮ ಮಾಹಿತಿ ವರದಿ, ಪಂಚನಾಮೆ ಹಾಗೂ ಸಾಕ್ಷಿ ಹೇಳಿಕೆಗಳನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರೇ ಸ್ವತ: ತಮ್ಮ ಸ್ವಂತ ಗೂಡ್ಸ್ ರಿಕ್ಷಾ ವಾಹನ ಸಂಖ್ಯೆ: KA-30/7332 ನೇದರಲ್ಲಿ ಅನಧಿಕೃತವಾಗಿ ಪಾಸ್ ಯಾ ಪರ್ಮಿಟ್ ಇಲ್ಲದೇ ಮತ್ತು ಇಲಾಖೆಯ ಯಾವುದೇ ಛಪ್ಪಾ ಮೊಹರ್ ಇಲ್ಲದ ಸಾಗ ಕೊರೆದ ನಗಗಳನ್ನು ಕಳ್ಳಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿರುತ್ತಾರೆ. ಇಲ್ಲಿ ಅಪರಾಧಿಯೇ ಸ್ವತ: ಚಾಲಕ ಹಾಗೂ ವಾಹನದ ಮಾಲೀಕ ಮತ್ತು ಅರ್ಜಿದಾರ ಆಗಿದ್ದಾರೆ ಎನ್ನುವದು ದೃಢಪಟ್ಟಿದೆ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು

ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಗೂಡ್ಸ್ ರಿಕ್ಷಾ ವಾಹನ ಸಂಖ್ಯೆ: KA-30/7332 ಇದು ದಿನಾಂಕ: 13–08–2007 ರಂದು ಪ್ರಥಮ ಮಾಹಿತಿ ಸಂಖ್ಯೆ: 4/2007–08, ದಿನಾಂಕ: 13–08–2007 ರನ್ವಯ ದಾಖಲಾದ ಗುನ್ಹೆಯಲ್ಲಿ ಅನಧಿಕೃತವಾಗಿ ಸಾಗ ಕೊರೆದ ನಗಗಳು 31=0.217 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ಹೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಗೂಡ್ಸ್ ರಿಕ್ಷಾ ವಾಹನ ಸಂಖ್ಯೆ: KA-30/7332 ಮತ್ತು ಅದರಲ್ಲಿದ್ದ ಸಾಗ ಕೊರೆದ ನಗಗಳು 31=0.217 ಘ.ಮೀ. ನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA-30/7332 |
| 2) | ಇಂಜಿನ್ ನಂಬರ | : | D 36014522 |
| 3) | ಚಾಸಿ ನಂಬರ | : | T-16001569M05 |
| 4) | ವಾಹನದ ಮಾದರಿ | : | ಬಜಾಜ್ ಆಟೋ ಗೂಡ್ಸ ರಿಕ್ಷಾ (ನಾಲ್ಕು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ:17–10–2014 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಟಿ.ಹೀರಾಲಾಲ್, ಭಾ.ಅ.ಸೇ.**

ಅಧಿಕಾರಿಯುತ ಅಧಿಕಾರಿ ಹಾಗೂ

ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**PR. 1034**

**SC. 5**

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

## IN THE COURT OF AUTHORISED OFFICER AND DEPUTY CONSERVATOR OF FORESTS, KARWAR DIVISION, KARWAR

**ಕ್ರ.ಸಂ:ಎಸ್1/ಎಫ್‌ಓಸಿ/ವಿವ–1/2006–07, ಕಾರವಾರ, ದಿನಾಂಕ:14–11–2014.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

| **ಫಿರ್ಯಾದುದಾರರು:** | **ವಿರುದ್ಧ** | **ಅರ್ಜಿದಾರರು:** |
|---|---|---|
| ವಲಯ ಅರಣ್ಯಾಧಿಕಾರಿ, ಅಂಕೋಲಾ. | | ದೇವಿದಾಸ ಗಣಪತಿ ನಾಯಕ, ಸಾ: ವಾಸರಕುದ್ರಿಗೆ |
| (ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ | | ತಾಲೂಕು: ಅಂಕೋಲಾ, ಜಿಲ್ಲೆ: ಉತ್ತರಕನ್ನಡ. |
| ನಿರ್ದೇಶಕರು ಉ.ಕನ್ನಡ ಕಾರವಾರ) | | (ಅರ್ಜಿದಾರರ ಪರವಾಗಿ ಶ್ರೀಮತಿ ರೇಣುಕಾ ಪಿ. ಭಾರದ್ವಾಜ, ವಕೀಲರು) |

**ಪ್ರಸ್ತಾವನೆ:**

1. ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 28–01–2007 ರಂದು ವರದಿ ಸಲ್ಲಿಸುತ್ತಾ ದಿನಾಂಕ: 27–01–2007 ರಂದು ರಾತ್ರಿ 8.20 ಘಂಟೆ ಸುಮಾರಿಗೆ ಅಂಕೋಲಾ ತಾಲೂಕಿನ ರಾಷ್ಟ್ರೀಯ ಹೆದ್ದಾರಿ 17 ರಿಂದ ಅಗಸೂರು ಗ್ರಾಮದ ಕಡೆಗೆ ಕೋಡ್ಸಣಿಯಿಂದ ಹಾದು ಹೋದ ರಸ್ತೆಯ ಮುಖಾಂತರ ಟೆಂಪೋ ಟ್ರ್ಯಾಕ್ಸ್ ವಾಹನ ಸಂಖ್ಯೆ: ಕೆಎ–30/5390 ನೇದರಲ್ಲಿ ಅಕ್ರಮವಾಗಿ ಜಂಗ್ಲಿ ಸಾಗ ಮರಗಳ ನಗಗಳನ್ನು ಸಾಗಾಣಿಕೆ ಮಾಡಲಾಗುತ್ತದೆ ಎಂಬ ಖಚಿತ ಬಾತ್ಮಿ ಆಧರಿಸಿ, ಪಂಚರನ್ನು ಕರೆಯಿಸಿಕೊಂಡು ಸದರ ಸ್ಥಳಕ್ಕೆ ಇಲಾಖಾ ವಾಹನದಲ್ಲಿ ಹೋಗುತ್ತಿರುವಾಗ ಸದರ ವಾಹನದಲ್ಲಿ ಮ್ಹಾಲನ್ನು ತುಂಬಿಕೊಂಡು ಹೋಗುತ್ತಿರುವ ದೇವಿದಾಸ ಗಣಪತಿ ನಾಯಕ, ಸಾ:ವಾಸರಕುದ್ರಿಗೆ, ತಾಲೂಕು: ಅಂಕೋಲಾ ಮತ್ತು ಅವರ ಸಂಗಡಿಗರು ಇಲಾಖಾ ವಾಹನವನ್ನು ಕಂಡ ಕೂಡಲೇ ತಮ್ಮ ವಾಹನ ನಿಲ್ಲಿಸಿ ತಕ್ಷಣ ಪರಾರಿಯಾಗಿರುತ್ತಾರೆ. ಸದರಿ ವಾಹನದಲ್ಲಿ ಸಾಗ, ಸೀಸಂ, ಭರಣಗಿ ಮತ್ತು ಜಂಗ್ಲಿ ಜಾತಿಯ ಒಟ್ಟೂ 36 ನಗಗಳಿಗೆ 1.037 ಘ.ಮೀ. ಮ್ಹಾಲು ಇದ್ದು ಯಾವುದೇ ಇಲಾಖಾ ಛಪ್ಪಾ ವಗೈರೆ ಗುರುತು ಕಂಡು ಬರಲಿಲ್ಲ. ಕಾರಣ ಇದು ಅನಧಿಕೃತ ಮ್ಹಾಲು ಎಂದು ಖಚಿತಪಡಿಸಿಕೊಂಡು ಶಾಖಾ ವನಪಾಲಕ, ಶಿರೂರು ಇವರು ಪಂಚರ ಸಮಕ್ಷಮ ತಮ್ಮ ಪ್ರಥಮ ಮಾಹಿತಿ ವರದಿ ಸಂಖ್ಯೆ: 12/2006–07, ದಿನಾಂಕ: 27–01–2007 ರಂತೆ ಗುನ್ಹೆ ದಾಖಲಿಸಿ, ಆರೋಪಿ ನಾಪತ್ತೆಯಾಗಿರುವದರಿಂದ ಜಪ್ತಪಡಿಸಲಾದ ಸಾಗ, ಸೀಸಂ, ಭರಣಗಿ ಮತ್ತು ಜಂಗ್ಲಿ ಜಾತಿಯ ನಗಗಳು 36=1.037 ಘ.ಮೀ. ಮ್ಹಾಲನ್ನು ಹಾಗೂ ಗುನ್ಹೆಗೆ ಬಳಸಿದ ಟೆಂಪೋ ಟ್ರಾಕ್ಸ ವಾಹನ ಸಂಖ್ಯೆ: ಕೆಎ–30/5390ನೇದನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24,50, 62, 71A, 80, 104D ಮತ್ತು ಕರ್ನಾಟಕ ಅರಣ್ಯ ನಿಯಮ 1969 ರ ನಿಯಮ144 ರ ನೇರ ಉಲ್ಲಂಘನೆಯಾಗಿದ್ದು, ನಿಯಮ 165 ಹಾಗೂ ಭಾರತೀಯ ದಂಡ ಸಂಹಿತಿ 34ರ ಅಡಿ ಶಿಕ್ಷಾರ್ಹ ಅಪರಾಧವಾಗಿರುತ್ತದೆ. ಜಪ್ತ ವಾಹನ ಮತ್ತು ಮುದ್ದೆಮ್ಹಾಲನ್ನು ಪಂಚನಾಮೆ, ಸೀಜರ್ ರಿಪೋರ್ಟ ಮತ್ತು ಪ್ರಥಮ ಮಾಹಿತಿ ವರದಿ ಜೊತೆಗೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ

ಹಾಜರುಪಡಿಸಿರುತ್ತಾರೆ. ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಖಾತ್ರಿಪಡಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ 29-01-2007 ರಂದು ಸದರ ಜಪ್ತಪಡಿಸಿದ ವಾಹನ ಮತ್ತು ಸಾಗ ಸೀಸಂ ತುಂಡುಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಪ್ತ ವಾಹನದ ಕುರಿತು ಈ ಪ್ರಾಧಿಕಾರಕ್ಕೆ ವಾಹನ ಮಾಲೀಕರಾದ ಶ್ರೀ. ದೇವಿದಾಸ ಗಣಪತಿ ನಾಯಕ, ಸಾ: ವಾಸರಕುದ್ರಿಗೆ, ತಾಲೂಕು: ಅಂಕೋಲಾ ಇವರು ಅವರ ತರ್ಫೆ ನ್ಯಾಯವಾದಿಗಳ ಮುಖಾಂತರ ದಿನಾಂಕ: 01-02-2007 ರಂದು ಆರ್‌ಸಿ ಪುಸ್ತಕದ ಛಾಯಾಪ್ರತಿಯೊಂದಿಗೆ ಅರ್ಜಿ ಸಲ್ಲಿಸಿ ವಾಹನ ಬಿಡುಗಡೆಗೆ ಕೋರಿಕೊಂಡಿರುತ್ತಾರೆ.

3. ಈ ಪ್ರಾಧಿಕಾರದ ಆದೇಶ ದಿನಾಂಕ: 25-06-2007 ರಂದು ವಾಹನ ಮಾಲೀಕರಿಗೆ ಈ ಗುನ್ನೆಗೆ ಬಳಸಿದ ಟೆಂಪೋ ಟ್ರಾಕ್ಸ್ ವಾಹನ ಸಂಖ್ಯೆ ಕೆಎ-30/5390ನೇದನ್ನು ಅರ್ಜಿದಾರರಿಗೆ ಮಧ್ಯಂತರ ತಾಬಾ ಬಿಡುಗಡೆಗೊಳಿಸಲು ಅರ್ಜಿದಾರರು ಮಾಡಿದ ಮನವಿಯನ್ನು ತಿರಸ್ಕರಿಸಿದ್ದು ಇರುತ್ತದೆ. ತರುವಾಯ, ಸದರ ವಾಹನದ ಮಾಲೀಕರು ಮಾನ್ಯ ಜಿಲ್ಲಾ ಸೆಷನ್ ನ್ಯಾಯಾಲಯ, ಕಾರವಾರದಲ್ಲಿ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲು ಅರ್ಜಿ ಸಲ್ಲಿಸಿದ್ದು ಮಾನ್ಯ ಜಿಲ್ಲಾ ಸೆಷನ್ ನ್ಯಾಯಾಲಯ, ಕಾರವಾರ ರವರ ಆದೇಶ ಸಂಖ್ಯೆ: 103/2007, ದಿನಾಂಕ: 31-10-2007 ರ ಪ್ರಕಾರ ರೂ. 50000.00 ಬ್ಯಾಂಕ್ ಗ್ಯಾರಂಟಿಯನ್ನು ಹಾಜರುಪಡಿಸಿ ಮತ್ತು ಇನ್ನಿತರ ಶರತ್ತುಗಳಿಗೊಳಪಟ್ಟು ತಾತ್ಕಾಲಿಕವಾಗಿ ವಾಹನವನ್ನು ಬಿಡುಗಡೆಗೊಳಿಸಲು ಆದೇಶ ಮಾಡಿದ್ದು ಇರುತ್ತದೆ. ಆದರೆ, ವಾಹನ ಮಾಲೀಕರು ಬ್ಯಾಂಕ್ ಗ್ಯಾರಂಟಿ ಇತ್ಯಾದಿ ಯಾವುದನ್ನೂ ಈ ಪ್ರಾಧಿಕಾರಕ್ಕೆ ನೀಡದೇ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆಗೊಳಿಸಿಕೊಂಡಿದ್ದು ಇರುವದಿಲ್ಲ.

4. ಈ ಪ್ರಕರಣದ ವಿಚಾರಣೆಗಾಗಿ ವಾಹನ ಮಾಲೀಕರಿಗೆ ಈ ನ್ಯಾಯಾಲಯದಿಂದ ದಿನಾಂಕ: 29-05-2007, 17-10-2014 ರಂದು ಹಾಜರಾಗಲು ಮತ್ತು ಅವರ ಪರ ವಕಾಲತ್ ವಹಿಸಿದ ನ್ಯಾಯವಾದಿಗಳಿಗೂ ನೋಟೀಸು ಜಾರಿ ಮಾಡಿದ್ದು ಇರುತ್ತದೆ. ಆದರೆ, ದಿನಾಂಕ: 17-10-2014ರ ವಿಚಾರಣೆಗೆ ವಾಹನ ಮಾಲೀಕರಾಗಲಿ ಅಥವಾ ಅವರ ಪರ ವಕೀಲರಾಗಲಿ ಹಾಜರಾಗಿದ್ದು ಇರುವದಿಲ್ಲ.

5. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರು ಅಥವಾ ಅವರ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಇರುವದಿಲ್ಲ. ಆದರೆ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರಾಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಸಾಕ್ಷಿ ಹೇಳಿಕೆ ಪಿಡಬ್ಲ್ಯೂ -1 ರಿಂದ ಪಿಡಬ್ಲ್ಯೂ -3 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲ್ಯೂ -1: ಶ್ರೀ. ನವೀನ ಎಂ. ಶೆಟ್ಟಿ, ಅರಣ್ಯ ರಕ್ಷಕ, ಬೆಳಸೆ.

ಪಿಡಬ್ಲ್ಯೂ -2: ಶ್ರೀ. ಬಲೀಂದ್ರ ಹನುಮಾ ಗೌಡ, ದಿನಗೂಲಿ ನೌಕರ, ಹೊನ್ನೆಬೈಲ್

ಪಿಡಬ್ಲ್ಯೂ -3: ಶ್ರೀ. ಪ್ರವೀಣ ರಾಮಚಂದ್ರ ನಾಯಕ, ವಲಯ ಅರಣ್ಯಾಧಿಕಾರಿ, ಹಟ್ಟಿಕೇರಿ ಡಿಪೋ.

ನಿಶಾನೆ ಪಿ-1 ರಿಂದ ಪಿ-6 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ-1: ಪಂಚನಾಮೆ

ನಿಶಾನೆ ಪಿ-2&3: ವಾಹನದ ಛಾಯಾ ಚಿತ್ರ

ನಿಶಾನೆ ಪಿ-4: ಪ್ರಥಮ ಮಾಹಿತಿ ವರದಿ

ನಿಶಾನೆ ಪಿ-5: ಸೀಜರ್ ರಿಪೋಟ

ನಿಶಾನೆ ಪಿ-6: ವಿಚಾರಣಾ ವರದಿ.

6. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ, ಸೀಸಂ, ಭರಣಗಿ ಮತ್ತು ಜಂಗ್ಲಿ ಜಾತಿಯ ನಗಗಳು 36=1.037 ಘ.ಮೀ. ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಆ) ಈ ಮೇಲೆ ನಮೂದಿಸಿದ ಸಾಗ, ಸೀಸಂ, ಭರಣಗಿ ಮತ್ತು ಜಂಗ್ಲಿ ಜಾತಿಯ ನಗಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ಟೆಂಪೋ ಟ್ರಾಕ್ಸ್ ವಾಹನ ಸಂಖ್ಯೆ ಕೆಎ-30/5390 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಇ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) -- ಹೌದು

ಅಂಶ ನಂ. (ಆ) -- ಹೌದು

ಅಂಶ ನಂ. (ಇ) -- ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲ್ಯೂ -1** ನಾನು 2005 ರಿಂದ ಈ ವರೆಗೆ ಅರಣ್ಯ ರಕ್ಷಕ ಬೆಳಸೆ ಅಂತಾ ಕೆಲಸ ಮಾಡುತ್ತಿದ್ದೇನೆ. ಈ ಪ್ರಕರಣ ದಾಖಲಾಗುವ ಕಾಲಕ್ಕೆ ಶಾಖಾ ವನಪಾಲಕ ಎಂತಾ ಪ್ರವೀಣ ಆರ್. ನಾಯ್ಕ ಹಾಗೂ ಅಂಕೋಲಾ ವನಪಾಲಕರಾಗಿ ಶ್ರೀ. ವಿ.ಪಿ. ನಾಯ್ಕ ಇವರು ಕೆಲಸ ನಿರ್ವಹಿಸುತ್ತಿದ್ದರು. ದಿನಾಂಕ: 27-01-2007 ರಂದು ರಾತ್ರಿ 8.00ಘಂಟೆಗೆ ನಾನು ಹಾಗೂ ಪ್ರವೀಣ ನಾಯ್ಕ ಮತ್ತು ವಿ.ಪಿ. ನಾಯ್ಕ ಇವರು ಅಂಕೋಲಾ ವಲಯ ಕಚೇರಿಯಲ್ಲಿದ್ದಾಗ ಪ್ರವೀಣ ನಾಯ್ಕ ಇವರಿಗೆ ಅಗಸೂರು ಕಡೆಯಿಂದ ಅಂಕೋಲಾ ಕಡೆಗೆ ವಾಹನ ನಂ. ಕೆಎ-30/5390ನೇದರಲ್ಲಿ ಅನಧಿಕೃತವಾಗಿ ಕಟ್ಟಿಗೆ ಸಾಗಾಣಿಕೆಯಾಗುತ್ತಿದೆ ಎಂಬ ಬಾತ್ಮಿ ಬಂದಿತು. ಕೂಡಲೇ ನಾವು ಕಚೇರಿಗೆ ಪಂಚರಾದ ಬಲೀಂದ್ರ ಗೌಡ ಹಾಗೂ ದಾಮೋದರ ಗೌಡ ಇವರಿಗೆ ಕರೆಯಿಸಿದೆವು. ಅವರಿಗೆ

ವಿಷಯವನ್ನು ತಿಳಿಸಿ ಹಾಗೂ ವಲಯ ಅರಣ್ಯಾಧಿಕಾರಿಗಳಿಗೂ ವಿಷಯವನ್ನು ತಿಳಿಸಿ ಅವರ ನಿರ್ದೇಶನದ ಮೇರೆಗೆ ನಮ್ಮ ಇಲಾಖಾ ವಾಹನದಲ್ಲಿ ವಲಯ ಕಚೇರಿಯಿಂದ ಹೊರೆಟೆವು. ನಾವು ಎನ್.ಹೆಚ್. ನಂ. 17 ರ ಮೇಲೆ ಕೋಡ್ಸಣಿ ಮೇಲಿಂದ ಅಗಸೂರು ಕಡೆಗೆ ಹೋಗುತ್ತಿರುವಾಗ ನಮಗೆ ಮಾಹಿತಿ ಬಂದ ವಾಹನ ನಂ. ಕೆಎ–30/5390 ಟೆಂಪೋ ಟ್ರಾಕ್ಸ್ ಬರುವದು ನಮಗೆ ದೂರದಲ್ಲಿ ಕಂಡು ಬಂದಿತು. ಅವರಿಗೆ ನಮ್ಮ ಇಲಾಖಾ ವಾಹನ ಎದುರಲ್ಲಿ ಕಂಡು ಬಂದ ಕೂಡಲೇ ಅವರು ವಾಹನವನ್ನು ಅಲ್ಲಿಯೇ ನಿಲ್ಲಿಸಿ ಅದರಲ್ಲಿದ್ದ ಇಬ್ಬರು ಓಡಿ ಹೋಗಿರುತ್ತಾರೆ. ನಂತರ ಪಂಚರ ಸಮಕ್ಷಮ ಪರಿಶೀಲಿಸಲಾಗಿ, ವಾಹನಕ್ಕೆ ತಾಡಪತ್ರಿಯನ್ನು ಹಾಕಲಾಗಿತ್ತು. ವಾಹನದಲ್ಲಿ ಕಟ್ಟಿಗೆ ತುಂಡುಗಳು ಇದ್ದದ್ದು ಕಂಡು ಪರಿಶೀಲಿಸಲಾಗಿ ಅದರಲ್ಲಿ ಸಾಗ, ಸೀಸಂ, ಭರಣಗಿ ಮತ್ತು ಜಂಗ್ಲಿ ಜಾತಿಯ ಒಟ್ಟೂ 36 ಕಟ್ಟಿಗೆ ತುಂಡುಗಳು ಇದ್ದು ಅದಕ್ಕೆ ಇಲಾಖೆಯ ಯಾವುದೇ ಛಪ್ಪಾ ವಗೈರೆ ಇರಲಿಲ್ಲ. ಒಟ್ಟೂ 36 ತುಂಡುಗಳ ಅಳತೆಯನ್ನು ನೋಡಲಾಗಿ ಒಟ್ಟೂ ಅಳತೆ 1.037 ಘ.ಮೀ. ಇತ್ತು. ಅನಧಿಕೃತವಾಗಿ ಕಳ್ಳ ಸಾಗಾಣಿಕೆ ಮೂಲಕ ಕಟ್ಟಿಗೆ ಸಾಗಾಟ ಮಾಡುತ್ತಿದ್ದದ್ದು ದೃಢಪಟ್ಟಿದ್ದರಿಂದ ಸ್ಥಳದಲ್ಲಿ ಪಂಚನಾಮೆ ಬರೆಯಲಾಯಿತು. ಅದೇ ಸ್ಥಳದಲ್ಲಿ ಪ್ರವೀಣ ನಾಯ್ಕ ರವರು ಪ್ರಥಮ ಮಾಹಿತಿ ವರದಿಯನ್ನು ಸಹ ದಾಖಲಿಸಿರುತ್ತಾರೆ. ಪಂಚನಾಮೆಯಡಿ ಸದರ ವಾಹನವನ್ನು ಹಾಗೂ ಕಟ್ಟಿಗೆ ತುಂಡುಗಳನ್ನು ಜಪ್ತಪಡಿಸಿಕೊಂಡಿರುವದಾಗಿ ಸದರ ವಾಹನದ ಹಾಗೂ ಕಟ್ಟಿಗೆ ತುಂಡುಗಳ ಫೋಟೊವನ್ನು ನೋಡಿ ಗುರುತಿಸುತ್ತೇನೆ. ಸಾಕ್ಷಿ ನೋಡಿ ಗುರುತಿಸಿದ ಪಂಚನಾಮೆಯನ್ನು ನಿ.ಪಿ–1, ಸಾಕ್ಷಿಯ ಸಹಿಯನ್ನು ನಿಪಿ–1ಎ ವಾಹನದ ಫೋಟೊಗಳನ್ನು ನಿ.ಪಿ–2 ಮತ್ತು 3 ಎಂದು ಗುರುತಿಸಲಾಯಿತು.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಅವರ ವಕೀಲರನ್ನು ಕರೆಯಲಾಗಿ ಅವರು ಹಾಜರಾಗಿದ್ದು ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪಿಡಬ್ಲ್ಯೂ –2** ದಿನಾಂಕ: 27–01–2007 ರಂದು ನಾನು ಹಾಗೂ ದಾಮೋದರ ಇವರು ಅಂಕೋಲಾಕ್ಕೆ ನಮ್ಮ ಸಂಬಂಧಿಕರ ಮನೆಗೆ ಹೋಗಿ ವಾಪಸ್ ಬರುತ್ತಿದೆವು. ಅಲ್ಲಿ ಅರಣ್ಯ ಇಲಾಖೆಯ ಅಧಿಕಾರಿಗಳು ತಮಗೆ ಒಂದು ಬಾತ್ಮಿ ಇದೆ ನೀವು ಪಂಚರಾಗಿ ಬರಬೇಕೆಂದು ಕೇಳಿಕೊಂಡ ಮೇರೆಗೆ ನಾವು ಅದಕ್ಕೆ ಒಪ್ಪಿದೆವು. ಅರಣ್ಯ ಇಲಾಖೆಯ ಅಧಿಕಾರಿಗಳು ಹಾಗೂ ನಾವು ಇಲಾಖೆಯ ವಾಹನದ ಮೇಲೆ ಎನ್.ಹೆಚ್. ನಂಬರ–17 ರಲ್ಲಿ ಕೋಡ್ಸಣಿಯಿಂದ ಅಗಸೂರು ಕಡೆಗೆ ಹೋಗುತ್ತಿರುವಾಗ ಎದುರಿನಿಂದ ಕೆಎ–30/5390 ಬಿಳಿ ಬಣ್ಣದ ಟೆಂಪೋ ಟ್ರಾಕ್ಸ್ ಬಂದಿದ್ದು ಅರಣ್ಯ ಇಲಾಖೆಯ ವಾಹನವನ್ನು ನೋಡಿ, ಅದರಲ್ಲಿದ್ದ ಆರೋಪಿತರು ವಾಹನವನ್ನು ಅಲ್ಲಿಯೇ ಬಿಟ್ಟು ಓಡಿ ಹೋಗಿರುತ್ತಾರೆ. ನಮ್ಮ ಸಮಕ್ಷಮ ಅವರು ವಾಹನವನ್ನು ಪರೀಕ್ಷಿಸಿ ನೋಡಲಾಗಿ ಅದರಲ್ಲಿ ಒಟ್ಟೂ ಸಾಗ, ಸೀಸಂ, ಭರಣಗಿ ಮತ್ತು ಜಂಗ್ಲಿ ಜಾತಿಯ 36 ಕಟ್ಟಿಗೆಯ ತುಂಡುಗಳಿದ್ದು ಅವುಗಳಿಗೆ ಇಲಾಖೆಯ ಯಾವುದೇ ಛಪ್ಪಾ ಇರಲಿಲ್ಲ. ಇವು ಕಳ್ಳತನದಿಂದ ಅನಧಿಕೃತವಾಗಿ ಸಾಗಾಟ ಮಾಡುತ್ತಿದ್ದ ಕಟ್ಟಿಗೆ ತುಂಡುಗಳು ಎಂದು ಖಾತ್ರಿಯಾಗಿ ಅವುಗಳ ಅಳತೆ ಮಾಡಲಾಗಿ ಒಟ್ಟೂ 36=1.037 ಘ.ಮೀ ಇತ್ತು. ಈ ಬಗ್ಗೆ ಸ್ಥಳದಲ್ಲಿ ಪಂಚನಾಮೆ ಮಾಡಿ ವಾಹನ ಹಾಗೂ ಕಟ್ಟಿಗೆಯನ್ನು ಜಪ್ತಪಡಿಸಿಕೊಂಡರು. ಪಂಚನಾಮೆಯನ್ನು ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–1 ಎಂದು ಗುರುತಿಸಲಾಗಿದೆ. ಸಾಕ್ಷಿಯ ಸಹಿಯನ್ನು 1–ಬಿ ಎಂದು ಗುರುತಿಸಲಾಯಿತು. ಜಪ್ತಪಡಿಸಿದ ವಾಹನದ ಫೋಟೊವನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–2 ಮತ್ತು 3 ಎಂದು ಗುರುತಿಸಲಾಗಿದೆ. ನನ್ನ ಜೊತೆ ನಿಶಾನೆ ಪಿ–1ಕ್ಕೆ ಪಂಚರಾಗಿ ದಾಮೋದರ ಪೊಕ್ಕಾ ಗೌಡ ಇತ ಸಹಿ ಮಾಡಿರುತ್ತಾರೆ. ನಿ.ಪಿ–1 ರ ವಿವರಣೆಗಳನ್ನು ನಾನು ಓದಿ ಸಹಿ ಮಾಡಿದ್ದು ಅವು ಸರಿಯಾಗಿರುತ್ತದೆ. ಸದರ ಗುನ್ಹೆ ನಡೆದ ಸ್ಥಳದಲ್ಲಿ ನಮ್ಮ ಹೊರತಾಗಿ ಬೇರೆ ಯಾರೂ ಸಾರ್ವಜನಿಕರು ಇರಲಿಲ್ಲ.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಅವರ ವಕೀಲರನ್ನು ಕರೆಯಲಾಗಿ ಅವರು ಹಾಜರಾಗಿದ್ದು ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪಿಡಬ್ಲ್ಯೂ –3:** ನಾನು ಡಿಸೆಂಬರ್–2006 ರಿಂದ ಮಾರ್ಚ–2007 ರವರೆಗೆ ನಾನು ಶಾಖಾ ವನಪಾಲಕ, ಶಿರೂರಿನ ಇನಚಾರ್ಜ ಆಗಿ ಕೆಲಸ ಮಾಡುತ್ತಿದ್ದೆ. ಈ ಪ್ರಕರಣ ದಾಖಲಾಗುವ ಕಾಲಕ್ಕೆ ಅರಣ್ಯ ರಕ್ಷಕ ಎಂತಾ ನವೀನ ಶೆಟ್ಟಿ ಹಾಗೂ ಅಂಕೋಲಾ ವನಪಾಲಕರಾಗಿ ಶ್ರೀ. ವಿ.ಪಿ. ನಾಯ್ಕ ಇವರು ಕೆಲಸ ನಿರ್ವಹಿಸುತ್ತಿದ್ದರು. ದಿನಾಂಕ: 27–01–2007 ರಂದು ರಾತ್ರಿ 8.00ಘಂಟೆಗೆ ನಾನು ಹಾಗೂ ನವೀನ ಶೆಟ್ಟಿ ಮತ್ತು ವಿ.ಪಿ. ನಾಯ್ಕ ಇವರು ಅಂಕೋಲಾ ವಲಯ ಕಚೇರಿಯಲ್ಲಿದ್ದಾಗ ನನಗೆ ಅಗಸೂರು ಕಡೆಯಿಂದ ಅಂಕೋಲಾ ಕಡೆಗೆ ವಾಹನ ನಂ. ಕೆಎ–30/5390ನೇದರಲ್ಲಿ ಶ್ರೀ. ದೇವಿದಾಸ ಗಣಪತಿ ನಾಯ್ಕ ರವರು ಅನಧಿಕೃತವಾಗಿ ಕಟ್ಟಿಗೆ ಸಾಗಾಣಿಕೆ ಮಾಡುತ್ತಿದ್ದಾರೆ ಎಂಬ ಬಾತ್ಮಿ ಬಂದಿತು. ಕೂಡಲೇ ನಾವು ಕಚೇರಿಗೆ ಪಂಚರಾದ ಬಲೀಂದ್ರ ಗೌಡ ಹಾಗೂ ದಾಮೋದರ ಗೌಡ ಇವರಿಗೆ ಕರೆಯಿಸಿದೆವು. ಅವರಿಗೆ ವಿಷಯವನ್ನು ತಿಳಿಸಿ ಹಾಗೂ ವಲಯ ಅರಣ್ಯಾಧಿಕಾರಿಗಳಿಗೂ ವಿಷಯವನ್ನು ತಿಳಿಸಿ ಅವರ ನಿರ್ದೇಶನದ ಮೇರೆಗೆ ನಮ್ಮ ಇಲಾಖಾ ವಾಹನದಲ್ಲಿ ವಲಯ ಕಚೇರಿಯಿಂದ ಹೊರೆಟೆವು. ನಾವು ಎನ್.ಹೆಚ್. ನಂ. 17 ರ ಮೇಲೆ ಕೋಡ್ಸಣಿ ಮೇಲಿಂದ ಅಗಸೂರು ಕಡೆಗೆ ಹೋಗುತ್ತಿರುವಾಗ ನಮಗೆ ಮಾಹಿತಿ ಬಂದ ವಾಹನ ನಂ. ಕೆಎ–30/5390 ಟೆಂಪೋ ಟ್ರಾಕ್ಸ್ ಬರುವದು ನಮಗೆ ದೂರದಲ್ಲಿ ಕಂಡು ಬಂದಿತು. ಅವರಿಗೆ ನಮ್ಮ ಇಲಾಖಾ ವಾಹನ ಎದುರಲ್ಲಿ ಕಂಡು ಬಂದ ಕೂಡಲೇ ಅವರು ವಾಹನವನ್ನು ಅಲ್ಲಿಯೇ ನಿಲ್ಲಿಸಿ ಅದರಲ್ಲಿದ್ದ ಇಬ್ಬರು ಓಡಿ ಹೋಗಿರುತ್ತಾರೆ. ನಾವು ವಾಹನವನ್ನು ಇಳಿದು ಅವರಿಗೆ ಬೆನ್ನಟ್ಟಿದ್ದರೂ ಅವರು ಸಿಕ್ಕಿರುವದಿಲ್ಲ ಪರಾರಿಯಾಗಿರುತ್ತಾರೆ. ನಂತರ ನಾವು ವಾಹನದ ಹತ್ತಿರ ಬಂದು ಪಂಚರ ಸಮಕ್ಷಮ ಪರಿಶೀಲಿಸಲಾಗಿ, ವಾಹನಕ್ಕೆ ತಾಡಪತ್ರಿಯನ್ನು ಹಾಕಲಾಗಿತ್ತು. ವಾಹನದಲ್ಲಿ ಕಟ್ಟಿಗೆ ತುಂಡುಗಳು ಇದ್ದದ್ದು ಕಂಡು ಬಂದಿತು. ಕಟ್ಟಿಗೆ ತುಂಡುಗಳನ್ನು ಪರಿಶೀಲಿಸಲಾಗಿ ಅದರಲ್ಲಿ ಒಟ್ಟೂ 36 ತುಂಡುಗಳು ಇದ್ದದ್ದು ಕಂಡು ಬಂದಿರುತ್ತದೆ. ಅನಧಿಕೃತವಾಗಿ ಕಳ್ಳ ಸಾಗಾಣಿಕೆ ಮೂಲಕ ಕಟ್ಟಿಗೆ ಸಾಗಾಟ ಮಾಡುತ್ತಿದ್ದದ್ದು ದೃಢಪಟ್ಟಿದ್ದರಿಂದ ಸ್ಥಳದಲ್ಲಿ ಪ್ರಥಮ ಮಾಹಿತಿ ವರದಿ ಹಾಗೂ ಪಂಚನಾಮೆಯನ್ನು ದಾಖಲಿಸಿಕೊಳ್ಳಲಾಯಿತು. ಸದರ ವಾಹನದ ಹಾಗೂ ಕಟ್ಟಿಗೆ ತುಂಡುಗಳ ಫೋಟೊವನ್ನು ನೋಡಿದರೆ ಗುರುತಿಸುತ್ತೇನೆ. ಸಾಕ್ಷಿ ನೋಡಿ ಗುರುತಿಸಿದ ಪಂಚನಾಮೆಯನ್ನು ನಿ.ಪಿ–1 ಎಂತಾ ಈಗಾಗಲೇ ಗುರುತಿಸಲಾಗಿದ್ದು, ಸಾಕ್ಷಿಯ ಸಹಿಯನ್ನು ನಿಪಿ–1ಸಿ ಎಂದು ಗುರುತಿಸಲಾಯಿತು. ವಾಹನದ ಫೋಟೊಗಳನ್ನು ಸಾಕ್ಷಿ ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–2 ಮತ್ತು 3 ಎಂದು ಗುರುತಿಸಲಾಗಿದೆ. ಪ್ರವಾ ವರದಿಯನ್ನು ನಿಶಾನೆ ಪಿ–4 ಹಾಗೂ ಸಾಕ್ಷಿ ಸಹಿಯನ್ನು ನಿಪಿ–4ಎ ಎಂದು ಗುರುತಿಸಲಾಯಿತು.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಅವರ ವಕೀಲರನ್ನು ಕರೆಯಲಾಗಿ ಅವರು ಹಾಜರಾಗಿದುದ ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಅಂಶ ನಂ. (ಆ):**

ದಿನಾಂಕ: 27–01–2007 ರಂದು ರಾತ್ರಿ 8.20 ಘಂಟೆ ಸುಮಾರಿಗೆ ಅಂಕೋಲಾ ತಾಲೂಕಿನ ರಾಷ್ಟ್ರೀಯ ಹೆದ್ದಾರಿ 17 ರಿಂದ ಅಗಸೂರು ಗ್ರಾಮದ ಕಡೆಗೆ ಕೋಡ್ಸಣಿಯಿಂದ ಹಾದು ಹೋದ ರಸ್ತೆಯ ಮುಖಾಂತರ ಟೆಂಪೋ ಟ್ರ್ಯಾಕ್ಸ್ ವಾಹನ ಸಂಖ್ಯೆ: ಕೆಎ–30/5390 ನೇದರಲ್ಲಿ ಅಕ್ರಮವಾಗಿ ಜಂಗ್ಲಿ ಸಾಗ ಮರಗಳ ನಗಗಳನ್ನು ಸಾಗಾಣಿಕೆ ಮಾಡಲಾಗುತ್ತದೆ ಎಂಬ ಖಚಿತ ಬಾತ್ಮಿ ಆಧರಿಸಿ, ಸದರ ಸ್ಥಳಕ್ಕೆ ಇಲಾಖಾ ವಾಹನದಲ್ಲಿ ಹೋಗುತ್ತಿರುವಾಗ ಸದರ ವಾಹನದಲ್ಲಿ ಮ್ಹಾಲನ್ನು ತುಂಬಿಕೊಂಡು ಹೋಗುತ್ತಿರುವ ದೇವಿದಾಸ ಗಣಪತಿ ನಾಯಕ, ಸಾ: ವಾಸರಕುದ್ರಿಗೆ, ತಾಲೂಕು: ಅಂಕೋಲಾ ಮತ್ತು ಅವರ ಸಂಗಡಿಗ ಇಲಾಖಾ ವಾಹನ ಕಂಡ ಕೂಡಲೇ ವಾಹನ ನಿಲ್ಲಿಸಿ ತಕ್ಷಣ ಪರಾರಿಯಾಗಿರುತ್ತಾರೆ. ಸದರಿ ವಾಹನದಲ್ಲಿ ಸಾಗ, ಸೀಸಂ, ಭರಣಗಿ ಮತ್ತು ಜಂಗ್ಲಿ ಜಾತಿಯ ಒಟ್ಟೂ 36 ನಗಗಳಿಗೆ 1.037 ಘ.ಮೀ. ಮ್ಹಾಲು ಇದ್ದು ಯಾವುದೇ ಇಲಾಖಾ ಛಪ್ಪಾ ವಗೈರೆ ಗುರುತು ಕಂಡು ಬರಲಿಲ್ಲ. ಕಾರಣ ಇದು ಅನಧಿಕೃತ ಮ್ಹಾಲು ಎಂದು ಖಚಿತಪಡಿಸಿಕೊಂಡು ಅವುಗಳಿಗೆ ಯಾವುದೇ ಅಧಿಕೃತ ಪಾಸ್/ಪರ್ಮಿಟ್ ಇಲ್ಲದೇ ಇರುವದು ಮತ್ತು ಇಲಾಖೆಯ ಯಾವುದೇ ಛಪ್ಪಾ ಮೊಹರು ವಗೈರೆ ಇಲ್ಲದೇ ಇರುವದು ಕಂಡು ಬಂದಿರುವದರಿಂದ ಸ್ಥಳದಲ್ಲಿ ಪಂಚರ ಸಮಕ್ಷಮ ಪಂಚನಾಮೆಯಿಂದ ಸಾಗ, ಸೀಸಂ, ಭರಣಗಿ ಮತ್ತು ಜಂಗ್ಲಿ ಜಾತಿಯ ನಗಗಳು 36=1.037 ಘ.ಮೀ. ಮ್ಹಾಲನ್ನು ಹಾಗೂ ಗುನ್ನೆಗೆ ಬಳಸಿದ ವಾಹನ ಸಂಖ್ಯೆ: ಕೆಎ–30/5390 ಟೆಂಪೋ ಟ್ರಾಕ್ಸ್ ವಾಹನವನ್ನು ಜಪ್ತಪಡಿಸಿಕೊಂಡಿದ್ದು ಇರುತ್ತದೆ. ಸದರ ವಾಹನವು ಗುನ್ನೆಯಲ್ಲಿ ಬಳಸಿಕೊಂಡಿರುವ ಬಗ್ಗೆ ಅದನ್ನು (ನಿ.ಪಿ– 1 ರಿಂದ ನಿ.ಪಿ–6) ದಾಖಲಾಗಿದೆ. ವಿಚಾರಣೆ ಕಾಲಕ್ಕೆ ಅರ್ಜಿದಾರರು ಅಥವಾ ಅವರ ಪರ ವಕೀಲರು ಹಾಜರಾಗಿದ್ದು ಇರುವದಿಲ್ಲ. ಆದರೆ, ಸರ್ಕಾರದ ಪರ ಸಹಾಯಕ ಅಭಿಯೋಗ ನಿರ್ದೇಶಕರು ಸಾಕ್ಷಿ ವಿಚಾರಣೆಯನ್ನು ಕೈಗೊಂಡಿದ್ದು **ಪಿಡಬ್ಲ್ಯೂ –1 ರಿಂದ ಪಿಡಬ್ಲ್ಯೂ –3** ಇವರು ನೀಡಿದ ಹೇಳಿಕೆಯು ಕೂಡ ಸದರ ಟೆಂಪೋ ಟ್ರಾಕ್ಸ ವಾಹನ ಮತ್ತು ಮುದ್ದೆ ಮ್ಹಾಲನ್ನು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ನೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ಹಾಜರಾಗಿದ್ದು ಇರುವದಿಲ್ಲ. ಇದರಿಂದ ಅವರ ಪರವಾಗಿ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿರುತ್ತಾರೆ. ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009(I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ವಾಹನ ಸಂಖ್ಯೆ: ಕೆಎ–30/5390 ಟೆಂಪೋ ಟ್ರಾಕ್ಸ್ ಇದು ದಿನಾಂಕ: 27–01–2007 ರಂದು ಪ್ರಥಮ ಮಾಹಿತಿ ಸಂಖ್ಯೆ: 12/2006–07, ದಿನಾಂಕ: 27–01–2007 ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸಾಗ, ಸೀಸಂ, ಭರಣಗಿ ಮತ್ತು ಜಂಗ್ಲಿ ಜಾತಿಯ ನಗಗಳು 36=1.037 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ವಾಹನ ಸಂಖ್ಯೆ: ಕೆಎ–30/5390 ಟೆಂಪೋ ಟ್ರಾಕ್ಸ್ ಮತ್ತು ಅದರಲ್ಲಿದ್ದ ಸಾಗ, ಸೀಸಂ, ಭರಣಗಿ ಮತ್ತು ಜಂಗ್ಲಿ ಜಾತಿಯ ನಗಗಳು 36=1.037 ಘ.ಮೀ.ನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA-30/5390 |
| 2) | ಇಂಜಿನ್ ನಂಬರ | : | D14004455 |
| 3) | ಚಾಸಿ ನಂಬರ | : | T57006103D02 |
| 4) | ವಾಹನದ ಮಾದರಿ | : | ಟೆಂಪೋ ಟ್ರಾಕ್ಸ್ (ನಾಲ್ಕು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ:14–11–2014 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಟಿ.ಹೀರಾಲಾಲ್, ಭಾ.ಅ.ಸೇ.**

ಅಧಿಕಾರಿಯುತ ಅಧಿಕಾರಿ ಹಾಗೂ

ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**PR. 1037**

**SC. 5**

**ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ**

**IN THE COURT OF AUTHORISED OFFICER AND DEPUTY CONSERVATOR OF FORESTS, KARWAR DIVISION, KARWAR**

**ಕ್ರ.ಸಂ:ಎಸ್1/ಎಫ್‌ಓಸಿ/ವಿವ–10/2007–08, ಕಾರವಾರ, ದಿನಾಂಕ:14–11–2014.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

| **ಫಿರ್ಯಾದುದಾರರು:** | **ವಿರುದ್ಧ** | **ಅರ್ಜಿದಾರರು:** |
|---|---|---|
| ವಲಯ ಅರಣ್ಯಾಧಿಕಾರಿ, ರಾಮನಗುಳಿ (ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಉ.ಕನ್ನಡ ಕಾರವಾರ) | | –– |

**ಪ್ರಸ್ತಾವನೆ:**

1. ವಲಯ ಅರಣ್ಯಾಧಿಕಾರಿ, ರಾಮನಗುಳಿ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 05–12–2007 ರಂದು ವರದಿ ಸಲ್ಲಿಸುತ್ತಾ ದಿನಾಂಕ: 05–12–2007 ರಂದು ಅಜಮಾಸು ಬೆಳಿಗ್ಗೆ 5.30 ಘಂಟೆ ಸುಮಾರಿಗೆ ನಮ್ಮ ಸಿಬ್ಬಂದಿಗಳಾದ ಶ್ರೀ. ಶ್ರೀನಿವಾಸ ಉಮೇಶ ನಾಯ್ಕ, ಅರಣ್ಯ ರಕ್ಷಕ ಹಳವಳ್ಳಿ, ಶ್ರೀ. ವೆಂಕಟೇಶ ಪುಟ್ಟಾ ಗೌಡ, ಅರಣ್ಯರಕ್ಷಕ, ಶೇವಕಾರ ಇವರು ಸರ್ಕಾರಿ ವಾಹನ ಸಂಖ್ಯೆ: ಕೆಎ–01/ಜಿ–1288ನೇದರಲ್ಲಿ ಕೊಡ್ಲಗದ್ದಾ ಬ್ಲಾಕ್ ನಂ.XXIV-19ನೇದರ ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿಯ ಸಮೀಪದಲ್ಲಿ ಹಾದು ಹೋದ ರಾಷ್ಟ್ರೀಯ ಹೆದ್ದಾರಿ 63ರಲ್ಲಿ ಗಸ್ತು ತಿರುಗುವಾಗ ಒಂದು ವಾಹನವು ಅರಣ್ಯ ಪ್ರದೇಶದಿಂದ ಹೆದ್ದಾರಿ ಕಡೆಗೆ ಬರುತ್ತಿರುವದು ಕಂಡು, ಸಿಬ್ಬಂದಿಗಳು ತಮ್ಮ ವಾಹನದಿಂದ ಕೆಳಗಿಳಿದು ವಾಹನದ ಹತ್ತಿರ ಹೋಗುತ್ತಿದ್ದಂತೆ ಸದರ ವಾಹನದಲ್ಲಿದ್ದ 2ಜನ ವ್ಯಕ್ತಿಗಳು ವಾಹನದ ಎರಡೂ ಬದಿಯ ಕದವನ್ನು ತಕ್ಷಣ ತೆಗೆದು ಜಿಗಿದು ಓಡಿ ಹೋಗಿರುತ್ತಾರೆ. ನಂತರ ಸಿಬ್ಬಂದಿಗಳು ಹೋಗಿ ವಾಹನವನ್ನು ನೋಡಿದಾಗ ತಾಡಪತ್ರಿ ಕಟ್ಟಿದ್ದು ಮೇಲೆ ಹತ್ತಿ ನೋಡಿದಲ್ಲಿ ಹಲವಾರು ತುಂಡುಗಳಿರುವದನ್ನು ಕಂಡು ಅದನ್ನು ಪರಿಶೀಲಿಸಲಾಗಿ ಸಾಗವಾನಿ ಜಾತಿಯದು ಎಂದು ಖಾತ್ರಿಪಡಿಸಿಕೊಂಡಿದ್ದು ಇರುತ್ತದೆ. ಸದರ ವಾಹನ ಚಲಿಸಿದ ಗುರ್ತುನ್ನು ಹಿಂಭಾಲಿಸಿದಾಗ ಅಲ್ಲಿಯೇ ಹತ್ತಿರದಲ್ಲಿ ಸಾಗವಾನಿ ಜಾತಿಯ 15 ಮರಗಳು ಕಡಿದ ಬಗ್ಗೆ ಬುಡಚಿಗಳು ಕಂಡು ಬಂದಂತೆ, ಸಿಬ್ಬಂದಿಗಳು ನಮ್ಮ ಸಮಕ್ಷಮ ಬುಡಚಿಗಳ ಮೇಲೆ ಹಾಗೂ ವಾಹನದಲ್ಲಿ ಹೇರಲಾದ ತುಂಡುಗಳ ಮೇಲೆ ಇಲಾಖಾ ಟಿ. ನಿಶಾನೆ ಹೊಡೆದು, ಇಲಾಖಾಪರ ಜಪ್ತ ಮಾಡಿಕೊಳ್ಳಲಾಯಿತು. ಸದರ ವಾಹನದಲ್ಲಿ ಹೇರಲಾದ ತುಂಡುಗಳ ಮತ್ತು ಬುಡಚಿಗಳ ಅಳತೆ 44=3.941 ಘ.ಮೀ ಆಗಿದ್ದು ಸದರ ವೇಳೆಯಲ್ಲಿ ಗುನ್ನೆ ನಡೆದ ಸ್ಥಳದಲ್ಲಿ ಸಾರ್ವಜನಿಕರು ಇರದೇ ಇರುವ ಕಾರಣ ಇಲಾಖಾ ಸಿಬ್ಬಂದಿಗಳನ್ನು ಪಂಚರನ್ನಾಗಿಸಿ ಪ್ರಥಮ ಮಾಹಿತಿ ವರದಿ ಮತ್ತು ಪಂಚನಾಮೆಯನ್ನು ಬರೆದಿದ್ದು ಇರುತ್ತದೆ. ಇದು ಅನಧಿಕೃತ ಮ್ಹಾಲು ಎಂದು ಖಚಿತಪಡಿಸಿಕೊಂಡು ಶಾಖಾ ವನಪಾಲಕ, ರಾಮನಗುಳಿ ಇವರು ತಮ್ಮ ಪ್ರಥಮ ಮಾಹಿತಿ ವರದಿ ಸಂಖ್ಯೆ: 08/2007–08, ದಿನಾಂಕ: 05–12–2007 ರಂತೆ ಗುನ್ನೆ ದಾಖಲಿಸಿ, ಆರೋಪಿ ನಾಪತ್ತೆಯಾಗಿರುವದರಿಂದ ಜಪ್ತಪಡಿಸಲಾದ ಸಾಗ ನಗಗಳು 44=3.941 ಘ.ಮೀ. ಮ್ಹಾಲನ್ನು ಹಾಗೂ ಗುನ್ನೆಗೆ ಬಳಸಿದ ವಾಹನ ಸಂಖ್ಯೆ: ಕೆಎ–30/7451 ಟಾಟಾ ಮಿನಿಲಾರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24 (e),50, 62, 71A, 80, 104D ಮತ್ತು ಕರ್ನಾಟಕ ಅರಣ್ಯ ನಿಯಮ 1969 ರ ನಿಯಮ144 ರ ನೇರ ಉಲ್ಲಂಘನೆಯಾಗಿದ್ದು, ನಿಯಮ 165 ಹಾಗೂ ಭಾರತೀಯ ದಂಡ ಸಂಹಿತಿ 34ರ ಅಡಿ ಶಿಕ್ಷಾರ್ಹ ಅಪರಾಧವಾಗಿರುತ್ತದೆ. ಜಪ್ತ ವಾಹನ ಮತ್ತು ಮುದ್ದೆಮ್ಹಾಲನ್ನು ಪಂಚನಾಮೆ, ಸೀಜರ್ ರಿಪೋರ್ಟ ಮತ್ತು ಪ್ರಥಮ ಮಾಹಿತಿ ವರದಿ ಜೊತೆಗೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿರುತ್ತಾರೆ. ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಖಾತ್ರಿಪಡಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ: 07–12–2007 ರಂದು ಸದರ ಜಪ್ತಪಡಿಸಿದ ವಾಹನ ಮತ್ತು ಸಾಗ , ತುಂಡುಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಪ್ತ ವಾಹನದ ಮಾಲೀಕತ್ವದ ಕುರಿತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರಿಗೆ ಈ ಪ್ರಾಧಿಕಾರದ ಪತ್ರ ದಿನಾಂಕ: 29–03–2008 ರಂದು ಜಪ್ತ ವಾಹನದ ಮಾಲೀಕತ್ವದ ವಿವರವನ್ನು ನೀಡಲು ಕೋರಲಾಗಿರುತ್ತದೆ. ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 03–04–2008 ರಂದು ವರದಿ ನೀಡಿರುತ್ತಾರೆ. ಸದರ ವರದಿಯನ್ನು ಆಧರಿಸಿ ವಾಹನ ಮಾಲೀಕರೆಂದು ತಿಳಿದು ಬಂದಿರುವ ಶ್ರೀ. ಉಮೇಶ ಬುದಿಯಾ ನಾಯ್ಕ, ಸಾ: ಸುಂಕಸಾಳ, ಡೋಂಗ್ರಿ, ತಾಲೂಕು: ಅಂಕೋಲಾ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 02–05–2008 ರಂದು ನೋಟೀಸು ಜಾರಿಗೊಳಿಸಿ 07 ದಿವಸದೊಳಗಾಗಿ ಅವರ ತರ್ಫೆ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಉತ್ತರ ನೀಡಲು ತಿಳಿಸಲಾಗಿತ್ತು. ಆದರೆ, ಶ್ರೀ. ಉಮೇಶ ಬುದಿಯಾ ನಾಯ್ಕ, ಸಾ: ಸುಂಕಸಾಳ, ಡೋಂಗ್ರಿ ಇವರು ದಿನಾಂಕ: 12–05–2008 ರಂದು ಈ ಪ್ರಾಧಿಕಾರಕ್ಕೆ ಅರ್ಜಿಯನ್ನು ನೀಡಿ ಈ ಗುನ್ನೆಯಲ್ಲಿ ಬಳಸಿದ ಟಾಟಾ ಮಿನಿಲಾರಿ ಸಂಖ್ಯೆ; ಕೆಎ–30/7451 ವಾಹನವು ತನ್ನ ಮಾಲೀಕತ್ವದ್ದು ಇರುವದಿಲ್ಲವಾಗಿ, ತನ್ನ ಭಾರಿ ವಾಹನವು ಕೆಎ–30/7451 ಆಗಿದ್ದು ಅದು ತನ್ನ ಬಳಿಯಲ್ಲಿದ್ದು, ಜಪ್ತ ವಾಹನ ಟಾಟಾ ಮಿನಿ ಲಾರಿ ಸಂಖ್ಯೆ: ಕೆಎ–30/7451 ತನ್ನ ಮಾಲೀಕತ್ವಕ್ಕೆ ಸಂಬಂಧಪಟ್ಟಿದ್ದು ಇರುವದಿಲ್ಲ. ಆದ್ದರಿಂದ ಅದನ್ನು ಮುಟ್ಟುಗೋಲು ಹಾಕಿಕೊಳ್ಳಲು ನನ್ನ ಉತ್ತರದ ಅವಶ್ಯಕತೆ ಇರುವದಿಲ್ಲವಾಗಿ ತಿಳಿಸಿರುತ್ತಾರೆ.

3. ಸದರ ಗುನ್ನೆಯಲ್ಲಿ ಜಪ್ತಪಡಿಸಲಾದ ಮಿನಿಲಾರಿ ಸಂಖ್ಯೆ: ಕೆಎ–30/7451 ವಾಹನದ ಮಾಲೀಕತ್ವದ ಕುರಿತು ಸಾರ್ವಜನಿಕರಿಗೆ ತಿಳುವಳಿಕೆ ಬಗ್ಗೆ ಈ ಪ್ರಾಧಿಕಾರದಿಂದ ದಿನಾಂಕ: 17–06–2010 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಲು ಕೋರಿಕೊಂಡಂತೆ ದಿನಾಂಕ: 26–08–2010 ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಿದ್ದು ಇರುತ್ತದೆ. ತರುವಾಯ, ಈ ಪ್ರಾಧಿಕಾರದಿಂದ ದಿನಾಂಕ: 04–08–2014 ರಂದು ಪುನ: ಸಂಬಂಧಪಟ್ಟ ವಾಹನ ಮಾಲೀಕರ ಗಮನಕ್ಕೆ ತರಲು ಕರಾವಳಿ ಮುಂಜಾವು ದಿನಪತ್ರಿಕೆಯಲ್ಲಿ ದಿನಾಂಕ: 06–08–2014 ರಂದು ಪ್ರಚಲಪಡಿಸಿದ್ದು ಇರುತ್ತದೆ. ಆದರೆ, ಈ ವಾಹನದ ಸಂಬಂಧಪಟ್ಟ ಮಾಲೀಕರು/ ಇತರೇ ವಾರಸುದಾರರು ಯಾರೂ ಕೂಡ ಈ ಪ್ರಾಧಿಕಾರಕ್ಕೆ ಅರ್ಜಿ ವಗೈರೆ ಸಲ್ಲಿಸಿದ್ದು ಇರುವದಿಲ್ಲ.

4. ಈ ಪ್ರಕರಣದ ವಿಚಾರಣೆಯನ್ನು ದಿನಾಂಕ: 21-06-2012, 25-07-2012, 28-08-2012, 25-09-2012 ಮತ್ತು 17-10-2014 ರಂದು ಕೈಗೊಳ್ಳಲಾಗಿದೆ.

5. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರು ಅಥವಾ ಅವರ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಇರುವದಿಲ್ಲ. ಆದರೆ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲ್ಯೂ -1 ರಿಂದ ಪಿಡಬ್ಲ್ಯೂ -2 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲ್ಯೂ -1: ಶ್ರೀ. ನೆಹರೂ ಕಾನಕೋ ಪರವಾರ, ಉಪ ವಲಯ ಅರಣ್ಯಾಧಿಕಾರಿ, ಸೀಬರ್ಡ್ ಯೋಜನೆ, ಕಾರವಾರ.

ಪಿಡಬ್ಲ್ಯೂ -2: ಸಂತೋಷ ಮಂಗೇಶ ಪವಾರ್, ಉಪ ವಲಯ ಅರಣ್ಯಾಧಿಕಾರಿ, ಅಂಕೋಲಾ ಶಾಖೆ.

ನಿಶಾನೆ ಪಿ-1 ರಿಂದ ಪಿ-5 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ-1: ಪಂಚನಾಮೆ

ನಿಶಾನೆ ಪಿ-2: ಪ್ರಥಮ ಮಾಹಿತಿ ವರದಿ

ನಿಶಾನೆ ಪಿ-3: ಸೀಜರ್ ರಿಪೋರ್ಟ

ನಿಶಾನೆ ಪಿ-4: ವಿಚಾರಣಾ ವರದಿ

ನಿಶಾನೆ ಪಿ-5: ವಾಹನದ ಛಾಯಾ ಚಿತ್ರ

6. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ ಜಾತಿಯ ನಗಗಳು 44=3.941 ಘ.ಮೀ. ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಆ) ಈ ಮೇಲೆ ನಮೂದಿಸಿದ ಸಾಗ ಜಾತಿಯ ನಗಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ಮಿನಿಲಾರಿ ವಾಹನ ಸಂಖ್ಯೆ ಕೆಎ-30/7451 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಇ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) -- ಹೌದು

ಅಂಶ ನಂ. (ಆ) -- ಹೌದು

ಅಂಶ ನಂ. (ಇ) -- ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲ್ಯೂ -1** ನಾನು ಮಾರ್ಚ-2007 ರಿಂದ ಮಾರ್ಚ2010 ರವರೆಗೆ ರಾಮನಗುಳಿ ವಲಯದಲ್ಲಿ ರಾಮನಗುಳಿ ಶಾಖಾ ವನಪಾಲಕ ಎಂತಾ ಕೆಲಸ ಮಾಡುತ್ತಿದ್ದೆ. ಈ ಪ್ರಕರಣ ದಾಖಲಾಗುವ ಕಾಲಕ್ಕೆ ಶಾಖಾ ವನಪಾಲಕ ಹಳವಳ್ಳಿ ಎಂತಾ ಸಂತೋಷ ಪವಾರ್ ಇವರು ಕೆಲಸ ಮಾಡುತ್ತಿದ್ದರು. ದಿನಾಂಕ: 05-12-2007 ರಂದು ಬೆಳಗ್ಗಿನ ಜಾವ ನಾನು ಶಾಖಾ ವನಪಾಲಕ ಹಳವಳ್ಳಿ ಸಂತೋಷ ಪವಾರ್ ಹಾಗೂ ಅರಣ್ಯ ರಕ್ಷಕರಾದ ಶ್ರೀನಿವಾಸ ನಾಯ್ಕ ಮತ್ತು ವೆಂಕಟ್ರಮಣ ಗೌಡ ಇವರು ಇಲಾಖಾ ವಾಹನದಲ್ಲಿ ಗಸ್ತು ತಿರುಗುತ್ತಿದ್ದೆವು. ನಾನು ಹೀಗಿ ಗಸ್ತು ತಿರುಗುತ್ತಾ ಬೆಳಗ್ಗಿನ ಜಾವಾ 5 ಗಂಟೆಗೆ ಕೊಡ್ಲಗದ್ದಾ ಬ್ಲಾಕ್-24-19 ರಲ್ಲಿ ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿ ಗಸ್ತು ತಿರುಗುತ್ತಿರುವಾಗ, ಒಂದು ಮಿನಿಲಾರಿ ಸಂಖ್ಯೆ: ಕೆಎ-30/7451ನೇದು ಅರಣ್ಯ ಪ್ರದೇಶದಿಂದ ಹೆದ್ದಾರಿ ಕಡೆಗೆ ಬರುತ್ತಿರುವದು ಕಂಡು ಬಂದಿತು. ಅದನ್ನು ನೋಡಿ ನಾವು ಕೆಳಗಿಳಿದು ಹೋಗುವಷ್ಟರಲ್ಲಿ ಅದರಲ್ಲಿದ್ದ ಇಬ್ಬರು ಓಡಿ ಹೋಗಿರುತ್ತಾರೆ ಓಡಿ ಹೋದವರಲ್ಲಿ (1) ಅಮೀರ ಸಾ: ಶಿರಸಿ (2) ನಾರಾಯಣ ಚೌಹಾಣ ದಾವಣಗೆರೆ ಎಂದು ನಮ್ಮ ಸಿಬ್ಬಂದಿಯವರು ಗುರುತಿಸಿರುತ್ತಾರೆ. ನಂತರ ವಾಹನ ಪರಿಶೀಲಿಸಲಾಗಿ, ವಾಹನಕ್ಕೆ ತಾಡಪತ್ರೆ ಕಟ್ಟಿದ್ದು ಕಂಡು ಬಂದಿತು. ವಾಹನದ ಮೇಲೆಹತ್ತಿ ನೋಡಲಾಗಿ, ಅದರಲ್ಲಿ ಸಾಗವಾನಿ ಜಾತಿಯ ತುಂಡುಗಳು ಇದ್ದು, ಸದರ ವಾಹನವು ಚಲಿಸಿದ ಟಾಯರಿನ ಗುರುತನ್ನು ಹಿಂಬಾಲಿಸಿ ಹೋಗಿ ನೋಡಿದಾಗ ಸುಮಾರು 15 ಸಾಗವಾನಿ ಜಾತಿಯ ಮರವನ್ನು ಕಡಿದ ಬಗ್ಗೆ ಬುಡುಚಿಗಳು ಕಂಡು ಬಂದವು. ವಾಹನದ ಮೇಲೆ ಇದ್ದ ತುಂಡುಗಳನ್ನು ಎಣಿಸಲಾಗಿ ಒಟ್ಟೂ 44 ತುಂಡುಗಳಿದ್ದು ಅದರ ಅಳತೆ 3.941 ಘ.ಮೀ. ಆಗಿತ್ತು. ಹಾಗೂ ಆ ತುಂಡುಗಳಿಗೆ ಇಲಾಖೆಯ ಯಾವುದೇ ಛಪ್ಪಾ ವಗೈರೆ ಇರಲಿಲ್ಲ. ಸದರಿ 15 ಮರಗಳನ್ನು ಕಡಿದು ತುಂಡುಗಳನ್ನು ತಯಾರಿಸಿದ ಬಗ್ಗೆ ಖಾತ್ರಿಯಾಗಿದ್ದು, ಬುಡುಚಿಗಳಿಗೆ ಹಾಗೂ ತುಂಡುಗಳಿಗೆ ನಂಬರುಗಳನ್ನು ಹಾಕಲಾಯಿತು. ಹಾಗೂ ಸ್ಥಳದಲ್ಲಿ ಈ ಬಗ್ಗೆ ಶಾಖಾ ವನಪಾಲಕ, ಹಳವಳ್ಳಿಯವರು ಪಂಚನಾಮೆಯನ್ನು ಬರೆದಿರುತ್ತಾರೆ. ಸ್ಥಳದಲ್ಲಿ ಅರಣ್ಯ ಪ್ರದೇಶ ಸುತ್ತುವರಿದಿದ್ದು ಯಾವುದೇ ಸಾರ್ವಜನಿಕರ ಸಂಪರ್ಕ ಇರುವದಿಲ್ಲ. ಕಾರಣ ನಮ್ಮ ಜೊತೆ ಇದ್ದ ಇಲಾಖಾ ಸಿಬ್ಬಂದಿಗಳನ್ನು ಪಂಚರನ್ನಾಗಿ ತೆಗೆದುಕೊಂಡು, ಪ್ರಥಮ ಮಾಹಿತಿ ವರದಿ ಮತ್ತು ಪಂಚನಾಮೆಯನ್ನು ಬರೆದು ಸದರಿ 44 ತುಂಡುಗಳನ್ನು ಹಾಗೂ ವಾಹನವನ್ನು ಜಪ್ತಪಡಿಸಿಕೊಳ್ಳಲಾಯಿತು. ಪಂಚನಾಮೆಯ ನಂತರ ವಾಹನವನ್ನು ಸಾಗವಾನಿ ತುಂಡುಗಳ ಸಮೇತ ವಲಯ ಕಚೇರಿಗೆ ತರಲಾಯಿತು. ಸಾಕ್ಷಿ ಪಂಚನಾಮೆ, ಪ್ರ.ವಾ ವರದಿ, ಜಪ್ತ ವರದಿ, ತನಿಖಾ ವರದಿ, ಹಾಗೂ ವಾಹನದ ಫೋಟೊವನ್ನು ಗುರುತಿಸಿದ್ದು ಅವುಗಳನ್ನು ಕ್ರಮವಾಗಿ ನಿ.ಪಿ-1 ರಿಂದ 5 ಎಂದು ನಿ.ಪಿ-1 ರಿಂದ ನಿ.ಪಿ-3 ರ ಮೇಲೆ ಇರುವ ಸಾಕ್ಷಿ ಸಹಿಯನ್ನು ನಿ.ಪಿ1-ಎ ಯಿಂದ ನಿ.ಪಿ. 3-ಎ ಎಂದು ಗುರುತಿಸಲಾಯಿತು.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಅವರ ವಕೀಲರನ್ನು ಕರೆಯಲಾಗಿ ಅವರು ಹಾಜರಾಗಿದುದ ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಪಿಡಬ್ಲ್ಯೂ –2** ನಾನು 8–8–2005 ರಿಂದ 23–02–2009 ರ ವರೆಗೆ ನಾನು ಹಳವಳ್ಳಿ ಶಾಖಾ ವನಪಾಲಕನಾಗಿ ಕೆಲಸ ಮಾಡುತ್ತಿದ್ದೆ. ನಾನು ಈ ಪ್ರಕರಣ ದಾಖಲಾಗುವ ಕಾಲಕ್ಕೆ ಶಾಖಾ ವನಪಾಲಕ ರಾಮನಗುಳಿ ಎಂತಾ ನೆಹರೂ ಕೆ. ಪರವಾರ ಇವರು ಕೆಲಸ ಮಾಡುತ್ತಿದ್ದರು. ದಿನಾಂಕ: 05–12–2007 ರಂದು ಬೆಳಗ್ಗಿನ ಜಾವ ನಾನು ಶಾಖಾ ವನಪಾಲಕ ರಾಮನಗುಳಿ ನೆಹರೂ ಪರವಾರ್ ಹಾಗೂ ಅರಣ್ಯ ರಕ್ಷಕರಾದ ಶ್ರೀನಿವಾಸ ನಾಯ್ಕ ಮತ್ತು ವೆಂಕಟ್ರಮಣ ಗೌಡ ಇವರು ಇಲಾಖಾ ವಾಹನದಲ್ಲಿ ಗಸ್ತು ತಿರುಗುತ್ತಿದ್ದೆವು. ನಾನು ಹೀಗಿ ಗಸ್ತು ತಿರುಗುತ್ತಾ ಬೆಳಗ್ಗಿನ ಜಾವಾ 5 ಗಂಟೆಗೆ ಕೊಡ್ಲಗದ್ದಾ ಬ್ಲಾಕ್–24–19 ರಲ್ಲಿ ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿ ಗಸ್ತು ತಿರುಗುತ್ತಿರುವಾಗ, ಒಂದು ಮಿನಿಲಾರಿ ಸಂಖ್ಯೆ: ಕೆಎ–30/7451ನೇದು ಅರಣ್ಯ ಪ್ರದೇಶದಿಂದ ಹೆದ್ದಾರಿ ಕಡೆಗೆ ಬರುತ್ತಿರುವದು ಕಂಡು ಬಂದಿತು. ಅದನ್ನು ನೋಡಿ ನಾವು ಕೆಳಗಿಳಿದು ಹೋಗುವಷ್ಟರಲ್ಲಿ ಅದರಲ್ಲಿದ್ದ ಇಬ್ಬರು ಓಡಿ ಹೋಗಿರುತ್ತಾರೆ ಓಡಿ ಹೋದವರಲ್ಲಿ (1) ಅಮೀರ ಸಾ: ಶಿರಸಿ (2) ನಾರಾಯಣ ಚೌಹಾಣ ದಾವಣಗೆರೆ ಎಂದು ನಮ್ಮ ಸಿಬ್ಬಂದಿಯವರು ಗುರುತಿಸಿರುತ್ತಾರೆ. ನಂತರ ನಾವು ವಾಹನ ಪರಿಶೀಲಿಸಿದಾಗ ವಾಹನಕ್ಕೆ ತಾಡಪತ್ರೆ ಕಟ್ಟಿದ್ದು ಕಂಡು ಬಂದಿತು. ಮೇಲೆಹತ್ತಿ ನೋಡಲಾಗಿ, ಅದರಲ್ಲಿ ಸಾಗವಾನಿ ಜಾತಿಯ ತುಂಡುಗಳು ಇದ್ದದ್ದು ಕಂಡು ಬಂದಿತು. ಸದರ ವಾಹನವು ಚಲಿಸಿದ ಟಾಯರಿನ ಗುರುತನ್ನು ಹಿಂಬಾಲಿಸಿ ಹೋಗಿ ನೋಡಿದಾಗ ಸುಮಾರು 15 ಸಾಗವಾನಿ ಜಾತಿಯ ಮರವನ್ನು ಕಡಿದ ಬಗ್ಗೆ ಬುಡುಚಿಗಳು ಕಂಡು ಬಂದವು. ವಾಹನದ ಮೇಲೆ ಇದ್ದ ತುಂಡುಗಳನ್ನು ಎಣಿಸಲಾಗಿ ಒಟ್ಟೂ 44 ತುಂಡುಗಳಿದ್ದು ಅದರ ಅಳತೆ 3.941 ಘ.ಮೀ. ಆಗಿತ್ತು. ಹಾಗೂ ಆ ತುಂಡುಗಳಿಗೆ ಇಲಾಖೆಯ ಯಾವುದೇ ಛಪ್ಪಾ ವಗೈರೆ ಇರಲಿಲ್ಲ. ಸದರಿ 15 ಮರಗಳನ್ನು ಕಡಿದು ತುಂಡುಗಳನ್ನು ತಯಾರಿಸಿದ ಬಗ್ಗೆ ಖಾತ್ರಿಯಾಗಿದ್ದು, ಬುಡುಚಿಗಳಿಗೆ ಹಾಗೂ ತುಂಡುಗಳಿಗೆ ನಂಬರುಗಳನ್ನು ಹಾಕಲಾಯಿತು. ಹಾಗೂ ಸ್ಥಳದಲ್ಲಿ ಈ ಬಗ್ಗೆ ನಾನು ಪಂಚನಾಮೆಯನ್ನು ಬರೆದಿರುತ್ತೇನೆ. ಸ್ಥಳದಲ್ಲಿ ಅರಣ್ಯ ಪ್ರದೇಶ ಸುತ್ತುವರಿದಿದ್ದು ಯಾವುದೇ ಸಾರ್ವಜನಿಕರ ಸಂಪರ್ಕ ಇರುವದಿಲ್ಲ. ಕಾರಣ ನಮ್ಮ ಜೊತೆ ಇದ್ದ ಇಲಾಖಾ ಸಿಬ್ಬಂದಿಗಳನ್ನು ಪಂಚರನ್ನಾಗಿ ತೆಗೆದುಕೊಂಡು, ಪಂಚನಾಮೆಯನ್ನು ಬರೆದು ಸದರಿ 44 ತುಂಡುಗಳನ್ನು ಹಾಗೂ ವಾಹನವನ್ನು ಜಪ್ತಪಡಿಸಿಕೊಳ್ಳಲಾಯಿತು. ಪ್ರಥಮ ಮಾಹಿತಿ ವರದಿ ಮತ್ತು ಪಂಚನಾಮೆಯ ನಂತರ ವಾಹನವನ್ನು ಸಾಗವಾನಿ ತುಂಡುಗಳ ಸಮೇತ ವಲಯ ಕಚೇರಿಗೆ ತರಲಾಯಿತು. ಸಾಕ್ಷಿ ಪಂಚನಾಮೆಯನ್ನು ನೋಡಿ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–1 ಎಂದು ಗುರುತಿಸಲಾಗಿದ್ದು, ಸಾಕ್ಷಿ ಸಹಿಯನ್ನು ನಿ.ಪಿ–1ಬಿ ಎಂದು ಗುರುತಿಸಲಾಯಿತು. ವಾಹನದ ಫೋಟೋವನ್ನು ಸಾಕ್ಷಿಯ ಈಗಾಗಲೇ ಗುರುತಿಸಿದ್ದು ಅದನ್ನು ಈಗಾಗಲೇ ನಿ.ಪಿ–5 ಎಂದು ಗುರುತಿಸಲಾಗಿದೆ.

**ಪಾಟೀ ಸವಾಲು :**

ಅರ್ಜಿದಾರರು ಹಾಗೂ ಅವರ ವಕೀಲರನ್ನು ಕರೆಯಲಾಗಿ ಅವರು ಹಾಜರಾಗಿದುದ ಇರುವದಿಲ್ಲ. ಕಾರಣ ಅರ್ಜಿದಾರರ ಪರ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಯಿತು.

**ಅಂಶ ನಂ. (ಅ):**

ದಿನಾಂಕ: 05–12–2007 ರಂದು ಅಜಮಾಸು ಬೆಳಿಗ್ಗೆ 5.30 ಘಂಟೆ ಸುಮಾರಿಗೆ ನಮ್ಮ ಸಿಬ್ಬಂದಿಗಳಾದ ಶ್ರೀ. ಶ್ರೀನಿವಾಸ ಉಮೇಶ ನಾಯ್ಕ, ಅರಣ್ಯ ರಕ್ಷಕ ಹಳವಳ್ಳಿ, ಶ್ರೀ. ವೆಂಕಟೇಶ ಪುಟ್ಟಾ ಗೌಡ, ಅರಣ್ಯರಕ್ಷಕ, ಶೇವಕಾರ ಇವರು ಸರ್ಕಾರಿ ವಾಹನ ಸಂಖ್ಯೆ: ಕೆಎ–01/ಜಿ–1288ನೇದರಲ್ಲಿ ಕೊಡ್ಲಗದ್ದಾ ಬ್ಲಾಕ್ ನಂ.XXIV-19ನೇದರ ಕಾಯ್ದಿಟ್ಟ ಅರಣ್ಯ ಪ್ರದೇಶದಲ್ಲಿಯ ಸಮೀಪದಲ್ಲಿ ಹಾದು ಹೋದ ರಾಷ್ಟ್ರೀಯ ಹೆದ್ದಾರಿ 63ರಲ್ಲಿ ಗಸ್ತು ತಿರುಗುವಾಗ ಒಂದು ವಾಹನವು ಅರಣ್ಯ ಪ್ರದೇಶದಿಂದ ಹೆದ್ದಾರಿ ಕಡೆಗೆ ಬರುತ್ತಿರುವದು ಕಂಡು, ಸಿಬ್ಬಂದಿಗಳು ತಮ್ಮ ವಾಹನದಿಂದ ಕೆಳಗಿಳಿದು ವಾಹನದ ಹತ್ತಿರ ಹೋಗುತ್ತಿದ್ದಂತೆ ಸದರ ವಾಹನದಲ್ಲಿದ್ದ ವ್ಯಕ್ತಿಗಳು ವಾಹನದ ಎರಡೂ ಬದಿಯ ಕದವನ್ನು ತಕ್ಷಣ ತೆಗೆದು ಜಿಗಿದು ಓಡಿ ಹೋದರು. ವಾಹನಕ್ಕೆ ತಾಡಪತ್ರಿ ಕಟ್ಟಿದ್ದು ಮೇಲೆ ಹತ್ತಿ ನೋಡಿದಲ್ಲಿ ಹಲವಾರು ತುಂಡುಗಳಿರುವದನ್ನು ಕಂಡು ಅದನ್ನು ಪರಿಶೀಲಿಸಲಾಗಿ ಸಾಗವಾನಿ ಜಾತಿಯದು ಎಂದು ಖಾತ್ರಿಪಡಿಸಿಕೊಂಡಿದ್ದು ಇರುತ್ತದೆ. ಸದರ ವಾಹನ ಚಲಿಸಿದ ಗುರ್ತುನ್ನು ಹಿಂಬಾಲಿಸಿದಾಗ ಅಲ್ಲಿಯೇ ಹತ್ತಿರದಲ್ಲಿ ಸಾಗವಾನಿ ಜಾತಿಯ 15 ಮರಗಳು ಕಡಿದ ಬಗ್ಗೆ ಬುಡಚಿಗಳು ಕಂಡು ಬಂದಂತೆ, ಸಿಬ್ಬಂದಿಗಳು ನಮ್ಮ ಸಮಕ್ಷಮ ಬುಡಚಿಗಳ ಮೇಲೆ ಹಾಗೂ ವಾಹನದಲ್ಲಿ ಹೇರಲಾದ ತುಂಡುಗಳ ಮೇಲೆ ಇಲಾಖಾ ಟಿ. ನಿಶಾನೆ ಹೊಡೆದು, ಇಲಾಖಾಪರ ಜಪ್ತ ಮಾಡಿಕೊಳ್ಳಲಾಯಿತು. ಸದರ ವಾಹನದಲ್ಲಿ ಹೇರಲಾದ ತುಂಡುಗಳ ಮತ್ತು ಬುಡಚಿಗಳ ಅಳತೆ 44=3.941 ಘ.ಮೀ ಆಗಿದ್ದು ಸದರ ವೇಳೆಯಲ್ಲಿ ಗುನ್ಹೆ ನಡೆದ ಸ್ಥಳದಲ್ಲಿ ಸಾರ್ವಜನಿಕರು ಇರದೇ ಇರುವ ಕಾರಣ ಇಲಾಖಾ ಸಿಬ್ಬಂದಿಗಳನ್ನು ಪಂಚರನ್ನಾಗಿಸಿ ಪ್ರಥಮ ಮಾಹಿತಿ ವರದಿ ಮತ್ತು ಪಂಚನಾಮೆಯನ್ನು ಬರೆಯಲಾಗಿದೆ. ಮುದ್ದೆಮ್ಹಾಲು ಹಾಗೂ ಗುನ್ಹೆಗೆ ಬಳಸಿದ ವಾಹನ ಸಂಖ್ಯೆ: ಕೆಎ–30/7451 ಟಾಟಾ ಮಿನಿಲಾರಿ ವಾಹನವನ್ನು ಜಪ್ತಪಡಿಸಿಕೊಂಡಿದ್ದು ಇರುತ್ತದೆ. ಸದರ ವಾಹನವು ಗುನ್ಹೆಯಲ್ಲಿ ಬಳಸಿಕೊಂಡಿರುವ ಬಗ್ಗೆ ಅದನ್ನು (ನಿ.ಪಿ– 1 ರಿಂದ ನಿ.ಪಿ–5) ದಾಖಲಾಗಿದೆ. ವಿಚಾರಣೆ ಕಾಲಕ್ಕೆ ಅರ್ಜಿದಾರರು ಅಥವಾ ಅವರ ಪರ ವಕೀಲರು ಹಾಜರಾಗಿದ್ದು ಇರುವದಿಲ್ಲ. ಆದರೆ, ಸರ್ಕಾರ ಪರ ಸಹಾಯಕ ಅಭಿಯೋಗ ನಿರ್ದೇಶಕರು ಸಾಕ್ಷಿ ವಿಚಾರಣೆಯನ್ನು ಕೈಕೊಂಡಿದ್ದು **ಪಿಡಬ್ಲ್ಯೂ –1 ರಿಂದ ಪಿಡಬ್ಲ್ಯೂ –2** ಇವರು ನೀಡಿದ ಹೇಳಿಕೆಯು ಕೂಡ ಸದರ ಮಿನಿಲಾರಿ ವಾಹನ ಮತ್ತು ಮುದ್ದೆ ಮ್ಹಾಲನ್ನು ಅರಣ್ಯ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ಹೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ಹಾಜರಾಗಿದ್ದು ಇರುವದಿಲ್ಲ. ಇದರಿಂದ ಅವರ ಪರವಾಗಿ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿರುತ್ತಾರೆ. ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು 2009(I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ

ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ವಾಹನ ಸಂಖ್ಯೆ: ಕೆಎ–30/7451 ಟಾಟಾ ಮಿನಿಲಾರಿ ಇದು ದಿನಾಂಕ: 05–12–2007 ರಂದು ಪ್ರಥಮ ಮಾಹಿತಿ ಸಂಖ್ಯೆ: 8/2007–08, ದಿನಾಂಕ: 05–12–2007 ರನ್ವಯ ದಾಖಲಾದ ಗುನ್ಹೆಯಲ್ಲಿ ಅನಧಿಕೃತವಾಗಿ ಸಾಗ ಜಾತಿಯ ನಗಗಳು 44=3.941 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ಹೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ವಾಹನ ಸಂಖ್ಯೆ: ಕೆಎ–30/7451 ಟಾಟಾ ಮಿನಿಲಾರಿ ಮತ್ತು ಅದರಲ್ಲಿದ್ದ ಸಾಗ ಜಾತಿಯ ನಗಗಳು 44=3.941 ಘ.ಮೀ.ನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA-30/7451 |
| 2) | ಇಂಜಿನ್ ನಂಬರ | : | 497D22DTOZ39951 |
| 3) | ಚಾಸಿ ನಂಬರ | : | 416403ETZ118488 |
| 4) | ವಾಹನದ ಮಾದರಿ | : | ಟಾಟಾ ಮಿನಿಲಾರಿ (ನಾಲ್ಕು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ:14–11–2014 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಟಿ.ಹೀರಾಲಾಲ್, ಭಾ.ಅ.ಸೇ.**

ಅಧಿಕಾರಿಯುತ ಅಧಿಕಾರಿ ಹಾಗೂ

ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**PR. 1038**

**SC. 5**

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

## IN THE COURT OF AUTHORISED OFFICER AND DEPUTY CONSERVATOR OF FORESTS, KARWAR DIVISION, KARWAR

**ಕ್ರ.ಸಂ:ಎ1/ಎಫ್‌ಓಸಿ/ವಿವ–1/2000–01, ಕಾರವಾರ, ದಿನಾಂಕ:17–10–2014.**

**ಉಪಸ್ಥಿತರು:** ಶ್ರೀ. ಟಿ. ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

| **ಫಿರ್ಯಾದುದಾರರು:** | **ವಿರುದ್ಧ** | **ಅರ್ಜಿದಾರರು:** |
|---|---|---|
| ಪೊಲೀಸ್ ಸಬ್ ಇನ್ಸಫೆಕ್ಟರ್ | | ಗಣೇಶ ಗೋವಿಂದ ತಾಮ್ಸೆ |
| ಕದ್ರಾ ಪೊಲೀಸ್ ಠಾಣೆ, ಕದ್ರಾ. ತಾಲೂಕು: ಕಾರವಾರ. | | ಸಾ: ಉಮಳೆಜೂಗ್, ಸಿದ್ದರ |
| (ಸರ್ಕಾರದ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಉ.ಕನ್ನಡ ಕಾರವಾರ) | | ತಾಲೂಕು: ಕಾರವಾರ. ಜಿಲ್ಲೆ: ಉತ್ತರಕನ್ನಡ. (ಅರ್ಜಿದಾರರ ಪರವಾಗಿ ಶ್ರೀ. ಎಸ್.ಹೆಚ್.ತಾಮ್ಸೆ, ವಕೀಲರು) |

**ಪ್ರಸ್ತಾವನೆ:**

1. ದಿನಾಂಕ: 22–09–2000 ರಂದು ಬೆಳಿಗ್ಗೆ 9.30 ಘಂಟೆಯ ಸಮಯದಲ್ಲಿ ಕೊಡಸಳ್ಳಿ ಕಡೆಯ ಕಾಡಿನಿಂದ ಸದಾಶಿವಗಡಕ್ಕೆ ಟೆಂಪೋದಲ್ಲಿ ಮರದ ತುಂಡುಗಳು ಕಳ್ಳ ಸಾಗಾಣಿಕೆ ಆಗುತ್ತದೆ ಎಂದು ಖಚಿತ ವರ್ತಮಾನ ಬಂದ ಮೇರೆಗೆ ಪಿಎಸ್ಐ ಕದ್ರಾ, ಹೆಚ್.ಸಿ–687, ಪಿ.ಸಿ–1139, 872 ಮತ್ತು 819 ಇವರು ಹಾಗೂ ಪಂಚರನ್ನು ಸರ್ಕಾರಿ ಜೀಪಿನಲ್ಲಿ ಕೂಡ್ರಿಸಿಕೊಂಡು ಬೊರೆ ಸೇತುವೆ ಹತ್ತಿರ ಹೋಗಿ ರಸ್ತೆಯಲ್ಲಿ ಕಾಯುತ್ತಿದ್ದಾಗ ಸದರಿ ಕಡೆಯಿಂದ ಒಂದು ಟೆಂಪೋ ಬಂದು ರಸ್ತೆ ಅಡ್ಡ ನಿಂತು ಟೆಂಪೋ ನಿಲ್ಲಿಸಲಾಗಿ ಡ್ರೈವರ್ ಸೀಟಿನಲ್ಲಿ ಇದ್ದ ವ್ಯಕ್ತಿ ಮತ್ತು ಹಿಂಬದಿಯ ಸೀಟಿನಲ್ಲಿದ್ದ ನಾಲ್ಕು ಜನರು ಟೆಂಪೋದಿಂದ ಕೆಳಗೆ ಇಳಿದರು. ಆ ಪೈಕಿ ಪಿ.ಎಸ್.ಐ ರವರು ಒಬ್ಬ ವ್ಯಕ್ತಿಯನ್ನು ಹಿಡಿದುಕೊಂಡರು. ಉಳಿದ ನಾಲ್ಕು ಜನರನ್ನು ಸಿಬ್ಬಂದಿಯವರು ಹಿಡಿಯಲು ಪ್ರಯತ್ನಿಸಿದಾಗ ಅವರು ಕಾಡಿನಲ್ಲಿ ಕಾಳಿ ನದಿಯ ಕಡೆಗೆ ಓಡಿ ಹೋದರು. ಸಿಬ್ಬಂದಿಯವರು ಅವರನ್ನು ಸ್ವಲ್ಪ ದೂರದವರೆಗೆ ಹಿಂಬಾಲಿಸಿದರೂ ಸಿಗಲಿಲ್ಲವೆಂದು ವರದಿ ಮಾಡಿದರು. ಸ್ಥಳದಲ್ಲಿ ಹಿಡಿದ ಒಬ್ಬ ವ್ಯಕ್ತಿಯ ಹೆಸರನ್ನು ಕೇಳಲಾಗಿ ಶ್ರೀಪಾದ ತಂದೆ ಘನಶ್ಯಾಮ್ ಬೊಳ್ವೆಕರ, ಸಾ: ಮಲ್ಲಾಪುರ ಅಂತಾ ಹೇಳಿದನು. ಓಡಿ ಹೋದವರ ಪರಿಚಯ ಇದ್ದು ಅವರ ಹೆಸರನ್ನು ಕೇಳಲಾಗಿ ಅವರ ಹೆಸರು (1) ಗಣೇಶ ತಂದೆ ಗೋವಿಂದ ತಾಮ್ಸೆ, ಸಾ: ಉಮಳೆಜೂಗ್ (2) ಮಹೇಶ ಸೈರು ಕೊಳಂಬಕರ ಸಾ: ಸಿದ್ದರ (3) ರಾಜೇಶ ತಂದೆ ಬದ್ದು ಕೊಳಂಬಕರ, ಸಾ: ಸಿದ್ದರ ಮತ್ತು (4) ಸಂಜಯ ವಿನಾಯಕ ದೇವಳಿ ಸಾ: ಮಲ್ಲಾಪುರ ಅಂತಾ ಹೇಳಿದನು. ನಂತರ ಪಂಚರ ಸಮಕ್ಷಮ ಟೆಂಪೋವನ್ನು ಪರಿಶೀಲಿಸಲಾಗಿ ಅದರ ನಂಬರ ಕೆಎ–30/533 ಮಹೇಂದ್ರ ಟೆಂಪೋ ಆಗಿದ್ದು ಅದರ ಮುಂದುಗಡೆಗೆ ಶ್ರೀ. ಬ್ರಹ್ಮ ಪ್ರಸನ್ನ ಮತ್ತು

ಮಹಾಮಾಯ ಮತ್ತು ಇಂಡಿಯಾ ಅಂತಾ ಇಂಗ್ಲೀಷಿನಿಂದ ಬರೆದದ್ದು ಅದರಲ್ಲಿ ಪಾಸ್ ಯಾ ಪರ್ಮಿಟ ಇಲ್ಲದೇ ಮತ್ತು ಅರಣ್ಯ ಇಲಾಖೆಯ ಯಾವುದೇ ಅಧಿಕೃತ ಛಪ್ಪಾ ವಗೈರೆ ಇಲ್ಲದೇ ಇರುವ ಬೀಟೆ ಮರದ 20 ತುಂಡುಗಳು ಇದ್ದವು. ಅದನ್ನು ಟೆಂಪೋದಲ್ಲಿ ಅಳತೆ ಮಾಡಿ ಅವುಗಳು 20=0.409 ಘ.ಮೀ. ಆಗಿದ್ದು ಅವುಗಳಿಗೆ ಕ್ರಮವಾಗಿ 1 ರಿಂದ 20 ರ ವರೆಗೆ ಸಂಖ್ಯೆಯನ್ನು ನೀಡಲಾಯಿತು. ಈ ಕುರಿತು ಪಿ.ಎಸ್.ಐ. ಕದ್ರಾ ಇವರು ಕಲಂ 379, 411 IPC, KF Act 24e, 71A, 104A ಪ್ರಕಾರ ಗುನ್ನೆ ದಾಖಲಿಸಿಕೊಂಡು ದಿನಾಂಕ: 22–09–2000 ರಂದು ಈ ನ್ಯಾಯಾಲಯಕ್ಕೆ ಜಪ್ತ ವಾಹನ ಮತ್ತು 20 ಸೀಸಂ ತುಂಡುಗಳನ್ನು ಪಂಚನಾಮೆ, ಪ್ರಥಮ ಮಾಹಿತಿ ವರದಿಯೊಂದಿಗೆ ಒಪ್ಪಿಸಿರುತ್ತಾರೆ. ಸದರ ಅರಣ್ಯ ಗುನ್ನೆ ಪ್ರಕರಣವನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71A ಪ್ರಕಾರ ಕ್ರಮ ಜರುಗಿಸಲು ಸೂಕ್ತವೆಂದು ಈ ನ್ಯಾಯಾಲಯಕ್ಕೆ ಕಂಡು ಬಂದಿದ್ದರಿಂದ ಈ ನ್ಯಾಯಾಲಯದ ಆದೇಶ ದಿನಾಂಕ: 16–10–2001 ರಂತೆ ಸದರ ಮಹೀಂದ್ರ ಟೆಂಪೊ ವಾಹನ ಹಾಗೂ 20 ಬೀಟೆ ತುಂಡುಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕದ್ರಾ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಗುನ್ನೆ ಪ್ರಕರಣದ ಆರೋಪಿತರು ಮತ್ತು ವಾಹನ ಮಾಲೀಕರಾದ ಶ್ರೀ. ಗಣೇಶ ಗೋವಿಂದ ತಾಮ್ಸೆ, ಸಾ: ಉಮಳೆಜೂಗ್, ಸಿದ್ಧರ ಇವರು ಈ ನ್ಯಾಯಾಲಯಕ್ಕೆ ಅವರ ಪರ ವಕೀಲರ ಮುಖಾಂತರ ದಿನಾಂಕ: 18–10–2000 ರಂದು ಅರ್ಜಿ ಸಲ್ಲಿಸಿ ಸದರ ವಾಹನವನ್ನು ಮಧ್ಯಂತರ ತಾಬಾ ಬಿಡುಗಡೆಗೊಳಿಸಲು ಮನವಿ ಮಾಡಿಕೊಂಡಿದ್ದು ಇರುತ್ತದೆ.

3. ಈ ನ್ಯಾಯಾಲಯ ಆದೇಶ ದಿನಾಂಕ: 18–01–2001 ರ ಪ್ರಕಾರ ಅರ್ಜಿದಾರರ ಮನವಿಯನ್ನು ತಿರಸ್ಕರಿಸಿ ಜಪ್ತ ಮಹೇಂದ್ರ ಟೆಂಪೋ ವಾಹನ ಸಂಖ್ಯೆ: ಕೆಎ–30/533 ನೇದನ್ನು ಅರ್ಜಿದಾರರಿಗೆ ಮಧ್ಯಂತರ ತಾಬಾ ಬಿಡುಗಡೆಗೊಳಿಸಲು ಅವರ ಮನವಿಯನ್ನು ತಿರಸ್ಕರಿಸಿ ಆದೇಶ ಮಾಡಿದ್ದು ಇರುತ್ತದೆ.

4. ಈ ಪ್ರಕರಣದ ವಿಚಾರಣೆಗಾಗಿ ವಾಹನ ಮಾಲೀಕರಿಗೆ ಈ ನ್ಯಾಯಾಲಯದಿಂದ ದಿನಾಂಕ: 09–11–2001, 21–12–2001, 18–1–2002, 15–2–2002, 01–03–2002, 23–03–2002, 11–04–2002, 19–04–2002, 10–10–2002, 25–10–2002, 8–11–2002, 20–12–2002, 07–03–2003, 31–05–2005, 21–02–2005, 14–03–2005, 04–04–2005, 16–05–2005, 06–06–2005, 20–06–2005, 04–07–2005, 08–08–2005, 29–08–2005, 18–12–2012, 28–12–2012, 10–01–2013, 18–01–2013, 08–11–2013, 21–11–2013, 06–12–2013, 20–12–2013, 17–01–2014, 31–01–2014, 04–07–2014, 25–07–2014 ಮತ್ತು 01–08–2014 ರಂದು ಹಾಜರಾಗಲು ಮತ್ತು ಅವರ ಪರ ವಕಾಲತ್ ವಹಿಸಿದ ನ್ಯಾಯವಾದಿಗಳಿಗೂ ನೋಟೀಸು ಜಾರಿ ಮಾಡಿದ್ದು ಇರುತ್ತದೆ

5. ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರ ಪರ ವಕೀಲರು ಸಾಕ್ಷಿ ವಿಚಾರಣೆ ಕಾಲಕ್ಕೆ ಹಾಜರಾಗಿದ್ದು ಹಾಗೂ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲ್ಯೂ –1 ರಿಂದ ಪಿಡಬ್ಲ್ಯೂ –2 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲ್ಯೂ –1: ಶ್ರೀ. ಗಣಪಯ್ಯ ಸುಬ್ಬ ವೈದ್ಯ, ಪಿ.ಎಸ್.ಐ. ಭಟ್ಕಳ

ಪಿಡಬ್ಲ್ಯೂ –2: ಶ್ರೀ. ಕಿಶೋರ ಗುರುದಾಸ ಸಳಗಾಂವಕರ, ಸಾ: ಕದ್ರಾ

ನಿಶಾನೆ ಪಿ–1 ರಿಂದ ಪಿ–3 ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ–1 : ಪಂಚನಾಮೆ

ನಿಶಾನೆ ಪಿ–2 : ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–3: ಪಿ.ಎಸ್. ಕದ್ರಾ ರವರ ವರದಿ

6. ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಮತ್ತು ಹೇಳಿಕೆಗಳನ್ನು ಆಲಿಸಿ, ಪರಿಶೀಲಿಸಿದ ನಂತರ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸೀಸಂ ತುಂಡುಗಳು 20=0.409 ಘ.ಮೀ. ಅಧಿಕೃತ ಪಾಸ್ ಯಾ ಪರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಆ) ಈ ಮೇಲೆ ನಮೂದಿಸಿದ ಸೀಸಂ ತುಂಡುಗಳು 20=0.409 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ಮಹೀಂದ್ರ ಟೆಂಪೊ ವಾಹನಸಂಖ್ಯೆ: KA-30/533 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಇ) ಈ ಗುನ್ನೆಯನ್ನು ವಾಹನದ ಮಾಲೀಕ/ಆಪಾದಿತನು/ಅರ್ಜಿದಾರನು ವಾಹನದ ಜವಾಬ್ದಾರಿ ಹೊಂದಿದ ವ್ಯಕ್ತಿಯಾಗಿ ಗೊತ್ತಿದ್ದು ಮಾಡಿದ್ದಾರೆಯೇ? ಹಾಗೂ ಅವರು ಈ ಗುನ್ನೆಯಲ್ಲಿ ಶಾಮೀಲಾಗಿದ್ದಾರೆಯೇ?

ಈ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) –– ಹೌದು

ಅಂಶ ನಂ. (ಆ) –– ಹೌದು

ಅಂಶ ನಂ. (ಇ) –– ಹೌದು

ಅಂಶ ನಂ. (ಈ) –– ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

**ಪಿ.ಡಬ್ಲ್ಯೂ –1** ದಿನಾಂಕ: 22–09–2000 ರ ಬೆಳಿಗ್ಗೆ 9.00 ಘಂಟೆಗೆ ನಾನು ಠಾಣೆಯಲ್ಲಿದ್ದಾಗ ಸಿ.ಪಿ.ಐ ಕದ್ರಾ ರವರಿಗೆ ಬಂದ ಮಾಹಿತಿ ಮೇರೆ ಒಂದು ಟೆಂಪೋದಲ್ಲಿ ಬೀಟೆ ಮರದ ತುಂಡುಗಳ ಸಾಗಾಟವನ್ನು ಕಳ್ಳತನದಿಂದ ಕೊಡಸಳ್ಳಿಯಿಂದ ಸದಾಶಿವಗಡ ಕಡೆಗೆ ಕಳ್ಳ ಸಾಗಾಟ ಮಾಡುತ್ತಿರುವದು ತಿಳಿದು ಬಂದಂತೆ ನಾನು ನನ್ನ ಸಹ ಸಿಬ್ಬಂದಿ ಜೊತೆಗೆ ಪಂಚರ ಸಮೇತ ಸರ್ಕಾರಿ ಜೀಪಿನಲ್ಲಿ ಕದ್ರಾ–ಬೊರೆ ರಸ್ತೆಯ ಸೇತುವೆಯ ಮೇಲೆ ಕಾಯುತ್ತ ಇರುವಾಗ ಬೆಳಿಗ್ಗೆ ಸುಮಾರು 10.00 ಘಂಟೆಗೆ ಒಂದು ಮಹೇಂದ್ರ ಟೆಂಪೋ ಬರುತ್ತಿದ್ದನ್ನು ಸಂಶಯ ಬಂದು ರಸ್ತೆಯನ್ನು ಅಡ್ಡಗಟ್ಟಿ ನಿಲ್ಲಿಸಿದೆವು. ಸದರ ವಾಹನದಲ್ಲಿ ವಾಹನ ಚಾಲಕ ಮತ್ತು ಇತರೇ 4 ಜನರು ದೂರದಲ್ಲಿ ಟೆಂಪೋದಿಂದ ಇಳಿಯುತ್ತಲೇ ಬೆಟ್ಟದ ಕಡೆಗೆ ಓಡಲಾರಂಭಿಸಿದರು. ಅವರನ್ನು ಬೆನ್ನಟ್ಟಿದಾಗ ಅವರ ಪೈಕಿ ಶ್ರೀ. ಶ್ರೀಪಾದ ತಂದೆ ಘನಶ್ಯಾಮ ಎಂಬುವವರನ್ನು ಹಿಡಿಯಲಾಯಿತು. ಉಳಿದವರು ಕಾಡಿನಲ್ಲಿ ಓಡಿ ಹೋಗಿರುತ್ತಾರೆ. ಮತ್ತು ಓಡಿ ಹೋದವರ ಹೆಸರನ್ನು ಕೇಳಲಾಗಿ ಅವರ ಹೆಸರನ್ನು ಸಹ ಹೇಳಿರುತ್ತಾರೆ. ನಂತರ ಪಂಚರ ಸಮಕ್ಷಮ ಟೆಂಪೋವನ್ನು ಪರೀಕ್ಷಿಸಿದಾಗ ಅದರಲ್ಲಿ 20 ಬೀಟೆ ಮರದ ತುಂಡುಗಳು ಕಂಡು ಬಂದಿದ್ದು ಅವುಗಳಿಗೆ ಅರಣ್ಯ ಇಲಾಖೆಯ ಯಾವುದೇ ಛಪ್ಪಾ ವಗೈರೆ ಇಲ್ಲದೇ ಇರುವದು ಮತ್ತು ಪಾಸ್/ಪರ್ಮಿಟ್ ಇಲ್ಲದನ್ನು ಖಾತ್ರಿ ಮಾಡಿಕೊಂಡೆವು. ಸದರಿ ಬೀಟೆ ತುಂಡಗಳು ಕಳ್ಳತನದಿಂದ ಸಾಗಾಟ ಮಾಡಲು ಪ್ರಯತ್ನಿಸಿದ್ದು ಖಾತ್ರಿಯಾದಂತೆ ಪಂಚರ ಸಮಕ್ಷಮ ಸ್ಥಳದಲ್ಲಿ ಪಂಚನಾಮೆಯನ್ನು ಬರೆದು ಈ ಬಗ್ಗೆ ಪ್ರಥಮ ವರ್ತಮಾನ ಗುನ್ನೆಯನ್ನು ದಾಖಲಿಸಿ ಗುನ್ನೆ ನಂ. 25/2000 ಇದನ್ನು ಕಲಂ 379, 411, ಐಪಿಸಿ ಮತ್ತು ಕಲಂ 24, 71ಎ, 104ಎ ರಡಿಯಲ್ಲಿ ಅಪರಾಧವನ್ನು ದಾಖಲಿಸಿಕೊಂಡೆವು. ಮತ್ತು ಆರೋಪಿಯನ್ನು ಕಾರವಾರ ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಹಾಜರುಪಡಿಸಲಾಯಿತು. ಜಪ್ತ ವಾಹನ ಮತ್ತು 20 ಬೀಟೆ ತುಂಡುಗಳನ್ನು ಅರಣ್ಯಾ ಇಲಾಖೆಗೆ ಕಲಂ 71 ಎ ಪ್ರಕಾರ ಕ್ರಮ ಕೈಕೊಳ್ಳಲು ಈ ಪ್ರಾಧಿಕಾರಕ್ಕೆ ಹಸ್ತಾಂತರಿಸಲಾಯಿತು. ಈ ಪಂಚನಾಮೆ ಪ್ರತಿಯನ್ನು ಸಾಕ್ಷಿಗೆ ತೋರಿಸಲಾಗಿ ಸದರ ಪ್ರತಿಯ ಮೇಲೆ ಸಾಕ್ಷಿಯ ಸಹಿಯನ್ನು ಸಾಕ್ಷಿಯು ಗುರುತಿಸಿ ಅದರಲ್ಲಿರುವ ಮಜಕೂರ ಸರಿ ಎಂದು ಹೇಳುತ್ತಾರೆ. ಅದನ್ನು ಈಗ ನಿಶಾನೆ ಪಿ–1 ಎಂದು ಗುರುತಿಸಲಾಯಿತು. ಸಾಕ್ಷಿಯ ಸಹಿಯನ್ನು ಪಿ–1ಎ ಎಂದು ಗುರುತಿಸಲಾಯಿತು. ಈಗ ಪ್ರಥಮ ವರ್ತಮಾನ ಪ್ರತಿಯನ್ನು ಸಾಕ್ಷಿಯು ನೋಡಿ ಅದರಲ್ಲಿರುವ ಸಹಿಯನ್ನು ಪಿ–2ಎ ಎಂದು ಗುರುತಿಸಲಾಯಿತು. ನ್ಯಾಯಾಲಯಕ್ಕೆ ಸಿಪಿಐ ರವರು ಈ ಪ್ರಕರಣದಲ್ಲಿ ಕ್ರಮಕ್ಕಾಗಿ ಪ್ರಾಧಿಕಾರದ ಮುಂದೆ ಸಲ್ಲಿಸಿದ ವರದಿಯನ್ನು ಸಾಕ್ಷಿಯು ನೋಡಿ ಸದರಿಯವರ ಸಹಿಯನ್ನು ಗುರುತಿಸಿ ಅದೇ ಎಂದು ತಿಳಿಸಿದರು. ಅದನ್ನು ಈಗ ಪಿ–3 ಎಂದು ಗುರುತಿಸಲಾಯಿತು.

**ಪಾಟೀ ಸವಾಲು ಶ್ರೀ. ಎಸ್.ಹೆಚ್. ತಾಮ್ಸೆ ವಕೀಲರಿಂದ ಅರ್ಜಿದಾರರ ಪರ:**

ಅರ್ಜಿದಾರರ ಪರ ವಕೀಲರು ದೀರ್ಘ ಪಾಟೀ ಸವಾಲು ಮಾಡಿದರೂ ಸಹ ಇವರು ಮುಖ್ಯ ವಿಚಾರಣೆಯಲ್ಲಿ ಹೇಳಿದ ವಿಷಯಗಳನ್ನು ತಿರಸ್ಕರಿಸುವಂತಹ ಯಾವುದೇ ವಿಷಯವನ್ನು ಈ ಸಾಕ್ಷಿದಾರರು ಪಾಟೀ ಸವಾಲಿನಲ್ಲಿ ಹೇಳಿದ್ದು ಇರುವದಿಲ್ಲ.

**ಪಿಡಬ್ಲ್ಯೂ –2** ದಿನಾಂಕ: 22–09–200 ರಂದು ಪೋಲಿಸರು ಹಾಗೂ ನನ್ನ ಸಮಕ್ಷಮದಲ್ಲಿ ನಮ್ಮನ್ನು ಜೀಪಿನಲ್ಲಿ ಕೂಡ್ರಿಸಿಕೊಂಡು ಬೊರೆ ಹತ್ತಿರ ಕದ್ರಾ ಕಡೆಯಿಂದ ಕಳ್ಳಾಟಿಕೆಯಲ್ಲಿ ಸೀಸಂ ತುಂಡುಗಳನ್ನು ಒಯ್ಯುತ್ತಾರೆಂದು ಇದ್ದ ಭಾತ್ಮಿ ಮೇರೆಗೆ ಕಾಯಿತ್ತಿರುವಾಗ ಒಂದು ಟೆಂಪೋ ಕದ್ರಾ ಕಡೆಯಿಂದ ಬಂದಿದ್ದು ಟೆಂಪೋ ಅಡ್ಡಗಟ್ಟಿ ನಿಲ್ಲಿಸಲಾಗಿ ಡ್ರೈವರ್ ಸೀಟಿನಲ್ಲಿ ಇದ್ದ ಒಬ್ಬ ವ್ಯಕ್ತಿ ಮತ್ತು ಹಿಂದಿನ ಸೀಟಿನಲ್ಲಿ ಇದ್ದ 4 ಜನರು ಟೆಂಪೋದಿಂದ ಕೆಳಗಿಳಿಯಲು ಪಿ.ಎಸ್.ಐ. ಒಬ್ಬ ವ್ಯಕ್ತಿಯನ್ನು ಹಿಡಿದುಕೊಂಡು ಉಳಿದವರನ್ನು ಹಿಡಿಯಲು ಪ್ರಯತ್ನಿಸಿದಾಗ ಅವರು ಓಡಿ ಪರಾರಿಯಾದರು. ಹಿಡಿದ ವ್ಯಕ್ತಿಯ ಹೆಸರು ಮತ್ತು ವಿಳಾಸ ತೆಗೆದುಕೊಂಡು ನಂತರ ನಮ್ಮ ಸಮಕ್ಷಮ ಪೊಲೀಸರು ಸದ್ರಿ ಟೆಂಪೋವನ್ನು ನಮ್ಮ ಸಮಕ್ಷಮದಲ್ಲಿ ಜಪ್ತ ಮಾಡಿ ಪಂಚನಾಮೆ ಬರೆದರು ಎನ್ನುವದು ಸರಿಯಲ್ಲ. ಸದ್ರಿ ಪಂಚನಾಮೆಯನ್ನು ನಾನು ಹಾಗೂ ಇನ್ನೊಬ್ಬ ಪಂಚ ಸ್ಥಳದಲ್ಲಿ ಸಹಿ ಮಾಡಿದ್ದೆವು ಎನ್ನುವದು ಸರಿಯಲ್ಲ. ಸದ್ರಿ ಪಂಚನಾಮೆಯನ್ನು ಈಗ ನೋಡುತ್ತಿದ್ದು ಅದು ನಿಶಾನೆ ಪಿ1 ಎಂತಾ ಈಗಾಗಲೇ ಗುರುತಿಸಲಾಗಿದ್ದು ಸಾಕ್ಷಿ ಸಹಿಯನ್ನು ಪಿ–1ಬಿ ಅಂತಾ ಗುರುತಿಸಲಾಗಿದೆ. ನಾನು ಯಾವುದೇ ದಾಖಲೆಗೆ ಸಹಿ ಮಾಡುವಾಗ ಅದರಲ್ಲಿದ್ದ ಮಾಹಿತಿಯನ್ನು ಓದಿಕೊಂಡು ಸರಿ ಇದ್ದಲ್ಲಿ ಮಾತ್ರ ಸಹಿ ಮಾಡುತ್ತೇನೆ. ಪೊಲೀಸರು ನಿಶಾನೆ ಪಿ–1 ರ ಮೇಲಿನ ನನ್ನ ಸಹಿಯನ್ನು ಒತ್ತಾಯ ಮಾಡಿ ತೆಗೆದುಕೊಂಡಿರುವದಿಲ್ಲ. ನಿಶಾನೆ ಪಿ–1ಕ್ಕೆ ಓದಿ ನೋಡಿ ಸಹಿ ಮಾಡಿರುತ್ತೇನೆ. ಹಾಗೂ ಅದರಲ್ಲಿದ್ದ ಬರವಣಿಗೆಯು ಸರಿ ಇರುತ್ತದೆ. ಅರ್ಜಿದಾರನಿಗೆ ಸಹಾಯ ಮಾಡುವ ಸಲುವಾಗಿ ಸುಳ್ಳು ಹೇಳುತ್ತೇನೆ ಅನ್ನುವದು ಸರಿಯಲ್ಲ ಎಂದು ತಿಳಿಸಿರುತ್ತಾರೆ.

**ಪಾಟೀ ಸವಾಲು ಆರ್.ವಿ.ಎನ್. ವಕೀಲರವರಿಂದ:** ನಾನು ಜೆ.ಎಂ.ಎಫ್.ಸಿ ನ್ಯಾಯಾಲಯದ ಮುಂದೆ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಸಾಕ್ಷಿ ನುಡಿಯುವಾಗ ಪಂಚನಾಮೆಗೆ ಪೊಲೀಸ್ ಠಾಣೆಯಲ್ಲಿ ಸಹಿ ಮಾಡಿದ್ದೇನೆ ಎಂದು ಹೇಳಿರುತ್ತೇನೆ. ಹಾಗೂ ನ್ಯಾಯಾಲಯದ ಮುಂದೆ ಹೇಳಿರುವ ಸಾಕ್ಷಿ ನಿಜವಿರುತ್ತದೆ. ಪೊಲೀಸರು ಹೇಳಿದಂತೆ ನಾನು ಪಂಚನಾಮೆಗೆ ಸಹಿ ಮಾಡಿದ್ದೇನೆ. ಅದರಲ್ಲಿ ಬರೆದಿರುವ ಸಂಗತಿ ನನಗೆ ತಿಳಿದಿರುವದಿಲ್ಲ ಮತ್ತು ಪೊಲೀಸ್‌ರಲ್ಲಿ ಈ ಬಗ್ಗೆ ತಿಳಿದುಕೊಂಡಿರುವದಿಲ್ಲ.

**ಅಂಶ ನಂ. (ಆ):**

ದಿನಾಂಕ: 22–09–2000 ರಂದು ಬೆಳಿಗ್ಗೆ 9.30 ಘಂಟೆಯ ಸಮಯದಲ್ಲಿ ಕೊಡಸಳ್ಳಿ ಕಡೆಯ ಕಾಡಿನಿಂದ ಸದಾಶಿವಗಡಕ್ಕೆ ಟೆಂಪೋದಲ್ಲಿ ಮರದ ತುಂಡುಗಳು ಕಳ್ಳ ಸಾಗಾಣಿಕೆ ಆಗುತ್ತದೆ ಎಂದು ಖಚಿತ ವರ್ತಮಾನ ಬಂದ ಮೇರೆಗೆ ಪಿಎಸ್‌ಐ ಕದ್ರಾ ಅವರ ಸಿಬ್ಬಂದಿಗಳು ಹಾಗೂ ಪಂಚರನ್ನು ಸರ್ಕಾರಿ ಜೀಪಿನಲ್ಲಿ ಕೂಡ್ರಿಸಿಕೊಂಡು ಬೊರೆ ಸೇತುವೆ ಹತ್ತಿರ ಹೋಗಿ ರಸ್ತೆಯಲ್ಲಿ ಕಾಯುತ್ತಿದ್ದಾಗ ಸದರಿ ಕಡೆಯಿಂದ ಒಂದು ಟೆಂಪೋ ಬಂದು ರಸ್ತೆ ಅಡ್ಡ ನಿಂತು ಟೆಂಪೋ ನಿಲ್ಲಿಸಲಾಗಿ ಡ್ರೈವರ್ ಶೀಟಿನಲ್ಲಿ ಇದ್ದ ವ್ಯಕ್ತಿ ಮತ್ತು ಹಿಂಬದಿಯ ಶೀಟಿನಲ್ಲಿದ್ದ ನಾಲ್ಕು ಜನರು ಟೆಂಪೋದಿಂದ ಕೆಳಗೆ ಇಳಿದರು. ಆ ಪೈಕಿ ಪಿ.ಎಸ್.ಐ ರವರು ಒಬ್ಬ ವ್ಯಕ್ತಿಯನ್ನು ಹಿಡಿಯುವಷ್ಟರಲ್ಲಿ ಉಳಿದ ನಾಲ್ಕು ಜನರು ಕಾಡಿನಲ್ಲಿ ಓಡಿ ಪರಾರಿಯಾಗಿರುತ್ತಾರೆ. ಸ್ಥಳದಲ್ಲಿ ಹಿಡಿದ ವ್ಯಕ್ತಿಯ ಹೆಸರನ್ನು ಕೇಳಲಾಗಿ ಶ್ರೀಪಾದ ತಂದೆ ಘನಶ್ಯಾಮ್ ಬೊಳ್ವೆಕರ, ಸಾ: ಮಲ್ಲಾಪುರ ಅಂತಾ ಹೇಳಿದನು. ನಂತರ ಪಂಚರ ಸಮಕ್ಷಮ ಟೆಂಪೋವನ್ನು ಪರಿಶೀಲಿಸಲಾಗಿ ಅದರ ನಂಬರ ಕೆಎ–30/533 ಮಹೇಂದ್ರ ಟೆಂಪೋ ಆಗಿದ್ದು ಅದರಲ್ಲಿ ಪಾಸ್ ಯಾ ಫರ್ಮಿಟ ಇಲ್ಲದೇ ಮತ್ತು ಅರಣ್ಯಾ ಇಲಾಖೆಯ ಯಾವುದೇ ಅಧಿಕೃತ ಛಪ್ಪಾ ವಗೈರೆ ಇಲ್ಲದೇ ಇರುವ ಬೀಟೆ ಮರದ 20 ತುಂಡುಗಳು ಇದ್ದವು. ಅವುಗಳಿಗೆ ಪ್ರಥಮ ಮಾಹಿತಿ ವರದಿ ಸಂಖ್ಯೆ: 25/2000, ದಿನಾಂಕ: 22–09–2000 ರಂತೆ ಗುನ್ನೆ ದಾಖಲಿಸಿಕೊಂಡಿದ್ದು ಇರುತ್ತದೆ. ಸದರ ವಾಹನವು ಅರಣ್ಯಾ ಗುನ್ನೆಯಲ್ಲಿ ಬಳಸಿದ ಬಗ್ಗೆ (ನಿ.ಪಿ– 1ರಿಂದ ನಿ.ಪಿ–3) ಹಾಜರುಪಡಿಸಲಾಗಿದೆ. ಇದೂ ಅಲ್ಲದೇ ಸರ್ಕಾರ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲ್ಯೂ –1 ಮತ್ತು ಪಿಡಬ್ಲ್ಯೂ –2** ಇವರು ತಮ್ಮ ಸಾಕ್ಷದಲ್ಲಿ ನಿ.ಪಿ–1ಕ್ಕೆ ಓದಿ ಸಹಿ ಹಾಕಿದ ಬಗ್ಗೆ ತಮ್ಮ ಪಾಟೀ ಸವಾಲಿನ ಉತ್ತರದಲ್ಲಿ ಹೇಳಿದ್ದು ಇದರಿಂದ ಮಹೇಂದ್ರ ಟೆಂಪೋ ವಾಹನದಲ್ಲಿ 20 ಸೀಸಂ ತುಂಡುಗಳು ಅರಣ್ಯಾ ಕಳ್ಳ ಸಾಗಾಣಿಕೆಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

**ಅಂಶ ನಂ. (ಇ):**

ದಿನಾಂಕ: 22–09–2000 ರಂದು ಕದ್ರಾ ಪೊಲೀಸ್ ಠಾಣೆಯ ಪಿ.ಎಸ್.ಐ ಇವರು ಈ ನ್ಯಾಯಾಲಯದ ಎದುರು ಹಾಜರುಪಡಿಸಿದ ವರದಿ ಹಾಗೂ ಅದರೊಂದಿಗೆ ಸಲ್ಲಿಸಿದ ಪ್ರಥಮ ಮಾಹಿತಿ ವರದಿ ಸಂಖ್ಯೆ: 25/2000 ಮತ್ತು ಪಂಚನಾಮೆಯನ್ನು **(ಪಿ–1 ರಿಂದ ಪಿ–3)** ಪರಿಶೀಲಿಸಲಾಗಿದೆ. ಆರೋಪಿತ ಅರ್ಜಿದಾರ/ವಾಹನ ಮಾಲೀಕ ಸ್ವತ: ತನ್ನ ಮಹೇಂದ್ರ ವಾಹನ ಸಂಖ್ಯೆ: KA-30/533 ನೇದರಲ್ಲಿ ಅನಧಿಕೃತವಾಗಿ ಯಾವುದೇ ಪಾಸ್ ಯಾ ಪರ್ಮಿಟ್ ಅಥವಾ ತತ್ಸಂಬಂಧ ಯಾವುದೇ ಅಧಿಕೃತ ದಾಖಲೆ ಇಲ್ಲದೇ ಸೀಸಂ ತುಂಡುಗಳನ್ನು ಕಳ್ಳಸಾಗಾಣಿಕೆಯಿಂದ ಸಾಗಿಸುವಾಗ ಸಿಕ್ಕಿಬಿದ್ದಿರುತ್ತಾರೆ ಎಂಬುದು ಖಚಿತವಾಗುತ್ತದೆ. ಆದರೆ, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಫಿರ್ಯಾದುದಾರರು ಒದಗಿಸಿದ ದಾಖಲೆಗಳು ಅಂದರೆ ಪ್ರಥಮ ಮಾಹಿತಿ ವರದಿ, ಪಂಚನಾಮೆ ಹಾಗೂ ಸಾಕ್ಷಿ ಹೇಳಿಕೆಗಳನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರೇ ಸ್ವತ: ತಮ್ಮ ಸ್ವಂತ ಮಹೇಂದ್ರ ಟೆಂಪೋ ವಾಹನ ಸಂಖ್ಯೆ: KA-30/533 ನೇದರಲ್ಲಿ ಅನಧಿಕೃತವಾಗಿ ಪಾಸ್ ಯಾ ಪರ್ಮಿಟ್ ಇಲ್ಲದೇ ಮತ್ತು ಇಲಾಖೆಯ ಯಾವುದೇ ಛಾಪಾ ಮೊಹರ್ ಇಲ್ಲದ ಸೀಸಂ ತುಂಡುಗಳನ್ನು ಕಳ್ಳಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿರುತ್ತಾರೆ. ಇಲ್ಲಿ ಅಪರಾಧಿಯೇ ಸ್ವತ: ವಾಹನದ ಮಾಲೀಕ ಮತ್ತು ಅರ್ಜಿದಾರ ಆಗಿದ್ದಾರೆ ಎನ್ನುವದು ದೃಢಪಟ್ಟಿದೆ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ಈ ಪ್ರಕರಣದ ಗುನ್ಹೆ ದಾಖಲಿಸಿದ ಹಾಗೂ ಸಾಕ್ಷಿಗಳ ವಿಚಾರಣೆಯಿಂದ ಹೇಳಿಕೆಯನ್ನು ದಾಖಲು ಮಾಡಿಕೊಳ್ಳಲಾಗಿದ್ದು, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಮುಂದುವರಿದು ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ವಾದ ಪುಷ್ಟೀಕರಿಸಲು ಮಾನ್ಯ ಸರ್ವೋಚ್ಛ ನ್ಯಾಯಾಲಯದ ತೀರ್ಪು 2009 (I) Crime Page 25 ಇದನ್ನು ನೀಡಿರುತ್ತಾರೆ ಮತ್ತು ಸಹಾಯಕ ಅಭಿಯೋಗ ನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಛ ನ್ಯಾಯಾಲಯದ ತೀರ್ಪು ನೋಡಲಾಗಿ ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಬಳಸಿದರೆ ಬಹಿರಂಗ ಹರಾಜು ಮಾಡಬಹುದೆಂದು ಆದೇಶ ಮಾಡಿದ್ದು ಇರುತ್ತದೆ. ಆದ್ದರಿಂದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಮಹೇಂದ್ರ ಟೆಂಪೋ ವಾಹನಸಂಖ್ಯೆ: KA-30/533 ಇದು ದಿನಾಂಕ: 22–09–2000 ರಂದು ಪ್ರಥಮ ಮಾಹಿತಿ ಸಂಖ್ಯೆ: 25/2000–01, ದಿನಾಂಕ: 22–09–2000 ರನ್ವಯ ದಾಖಲಾದ ಗುನ್ಹೆಯಲ್ಲಿ ಅನಧಿಕೃತವಾಗಿ ಸೀಸಂ 20 ತುಂಡುಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ಹೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಮಹೇಂದ್ರ ಟೆಂಪೋ ವಾಹನಸಂಖ್ಯೆ: KA-30/533 ಮತ್ತು ಅದರಲ್ಲಿದ್ದ ಸೀಸಂ ತುಂಡುಗಳು 20=0.409 ಘ.ಮೀ. ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA-30/533 |
| 2) | ಇಂಜಿನ್ ನಂಬರ | : | 54 004930 |
| 3) | ಚಾಸಿ ನಂಬರ | : | F5 470 DS4 2 ND |
| 4) | ವಾಹನದ ಮಾದರಿ | : | ಮಹೇಂದ್ರ ಟೆಂಪೊ (ನಾಲ್ಕು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ:17–10–2014 ರಂದು ಈ ನ್ಯಾಯಾಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಟಿ.ಹೀರಾಲಾಲ್, ಭಾ.ಅ.ಸೇ.**

ಅಧಿಕಾರಿಯುತ ಅಧಿಕಾರಿ ಹಾಗೂ

ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ.

**PR. 1036**

**SC. 5**

## ಔಷಧ ನಿಯಂತ್ರಣ ಇಲಾಖೆ

**ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560 001,**

**ಅಧಿಕೃತಜ್ಞಾಪನ**

**ಸಂಖ್ಯೆ: ಔನಿಇ/96/ಸಿಬ್ಬಂದಿ/2014–15, ದಿನಾಂಕ: 06.12.2014**

ಅಧಿಕೃತ ಜ್ಞಾಪನ ಸಂಖ್ಯೆ: ಔನಿಇ/96/ಸಿಬ್ಬಂದಿ/2014–15, ದಿನಾಂಕ: 18.09.2014ರಲ್ಲಿ ಔಷಧ ನಿಯಂತ್ರಣ ಇಲಾಖೆಯಲ್ಲಿ ಜೂನಿಯರ್ ಸೈಂಟಿಫಿಕ್ ಆಫೀಸರ್ ಬ್ಯಾಕ್‌ಲಾಗ್ ಹುದ್ದೆಗೆ ನೇಮಕ ಹೊಂದಿ ತರಬೇತಿಯಲ್ಲಿದ್ದ ಈ ಕೆಳಕಂಡ ಜೂನಿಯರ್ ಸೈಂಟಿಫಿಕ್ ಆಫೀಸರ್‌ಗಳನ್ನು, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ಹೆಸರಿನ ಮುಂದೆ ನಮೂದಿಸಿರುವ ಔಷಧ ಪರೀಕ್ಷಾ ಪ್ರಯೋಗಾಲಯಗಳಿಗೆ ಸ್ಥಳನಿಯುಕ್ತಿಗೊಳಿಸಿ ನೇಮಕ ಮಾಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಶ್ರೀ / ಶ್ರೀಮತಿ | ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾದ ಕಛೇರಿ ಹಾಗೂ ಹುದ್ದೆ |
|---|---|---|
| 1 | 2 | 3 |
| 1 | ಚೈತ್ರಾಮಣಿ ಬಿ.ಎಸ್. | ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ |
| 2 | ಜಿ. ನರೇಶ್ | ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ |
| 3 | ಕೃಷ್ಣ ಜಾಧವ್ | ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ |
| 4 | ತೇಜಸ್ವಿನಿ ಸಿ. | ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ |
| 5 | ಪಾಟೀಲ್ ಶಿವರಾಮನ್ | ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ |
| 6 | ಮಂಜುತೇಜ್ ಟಿ. ಆರ್. | ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ |

ಮೇಲ್ಕಾಣಿಸಿದ ಅಧಿಕಾರಿಗಳನ್ನು ದಿನಾಂಕ: 06.12.2014ರ ಅಪರಾಹ್ನದಂದು ಕೇಂದ್ರ ಕಛೇರಿಯಲ್ಲಿನ ತರಬೇತಿ ಅವಧಿಯಿಂದ ಬಿಡುಗಡೆಗೊಳಿಸಲಾಗಿದೆ.

**PR. 1089** **ರಘುರಾಮ ಭಂಡಾರಿ**

**SC. 50** **ಔಷಧ ನಿಯಂತ್ರಕರು**

## ಔಷಧ ನಿಯಂತ್ರಣ ಇಲಾಖೆ
## ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560 001,
## ಅಧಿಕೃತಜ್ಞಾಪನ
### ಸಂಖ್ಯೆ: ಔನಿಇ/97/ಸಿಬ್ಬಂದಿ/2014–15, ದಿನಾಂಕ: 06.12.2014

ಅಧಿಕೃತ ಜ್ಞಾಪನ ಸಂಖ್ಯೆ: ಔನಿಇ/97/ಸಿಬ್ಬಂದಿ/2014–15, ದಿನಾಂಕ: 18.09.2014ರಲ್ಲಿ ಔಷಧ ನಿಯಂತ್ರಣ ಇಲಾಖೆಯ ಔಷಧ ಪರಿವೀಕ್ಷಕರ ಹುದ್ದೆಗೆ ನೇಮಕ ಹೊಂದಿ ತರಬೇತಿಯಲ್ಲಿದ್ದ ಈ ಕೆಳಕಂಡ ಅಧಿಕಾರಿಗಳನ್ನು, ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರ ಹೆಸರಿನ ಮುಂದೆ ನಮೂದಿಸಿರುವ ಕಛೇಗಳಿಗೆ **ಔಷಧ ಮತ್ತು ಕಾಂತಿವರ್ಧಕ ಕಾಯ್ದೆ 1940ರ ಸೆಕ್ಷನ್ 21ರ ಅಡಿಯಲ್ಲಿ ಪರಿವೀಕ್ಷಕರಾಗಿ** ನೇಮಿಸಿ ಸ್ಥಳ ನಿಯುಕ್ತಿಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಔಷಧ ಪರಿವೀಕ್ಷಕರ ಹೆಸರು ಶ್ರೀ / ಶ್ರೀಮತಿ | ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾದ ಕಛೇರಿ ಹಾಗೂ ಹುದ್ದೆ |
|---|---|---|
| 1 | ನಂದಿನಿ ಎನ್. | ಔಷಧ ಪರಿವೀಕ್ಷಕರು–1, ಕೇಂದ್ರ ಕಛೇರಿ – ಖಾಲಿ ಇರುವ ಹುದ್ದೆ. |
| 2 | ರೇಣುಪ್ರಸಾದ್ ಎಂ.ಯು. | ಔಷಧ ಪರಿವೀಕ್ಷಕರು, ಉತ್ತರಕನ್ನಡ ವೃತ್ತ, ಕಾರವಾರ – ಖಾಲಿ ಇರುವ ಹುದ್ದೆ. |
| 3 | ನೇಹಾ ಮುರ್ಗಿ | ಔಷಧ ಪರಿವೀಕ್ಷಕರು –2, ಕೇಂದ್ರ ಕಛೇರಿ – ಖಾಲಿ ಇರುವ ಹುದ್ದೆ. |
| 4 | ಉದಯ್‌ಕಿಶೋರ್ ಪಿ. | ಔಷಧ ಪರಿವೀಕ್ಷಕರು –3, ಕೇಂದ್ರ ಕಛೇರಿ – ಖಾಲಿ ಇರುವ ಹುದ್ದೆ. |
| 5 | ದಯಾನಂದ ಕಾಡದೇವರ | ಔಷಧ ಪರಿವೀಕ್ಷಕರು –4, ಕೇಂದ್ರ ಕಛೇರಿ – ಖಾಲಿ ಇರುವ ಹುದ್ದೆ. |
| 6 | ಸುಹಾಸಿನಿ ಎನ್. | ಔಷಧ ಪರಿವೀಕ್ಷಕರು (ಗುಪ್ತವಾರ್ತೆ–1), ರಾಜ್ಯ ಗುಪ್ತವಾರ್ತಾ ಶಾಖೆ, ಕೇಂದ್ರ ಕಛೇರಿ– ಖಾಲಿ ಇರುವ ಹುದ್ದೆ |
| 7 | ಸಚಿನ್ | ಔಷಧ ಪರಿವೀಕ್ಷಕರು –2, ರಾಯಚೂರು ವೃತ್ತ, ರಾಯಚೂರು – ಹೊಸದಾಗಿ ಸೃಜನೆಯಾದ ಹುದ್ದೆ |
| 8 | ವಿಭಾ ಎಲ್. | ಔಷಧ ಪರಿವೀಕ್ಷಕರು –7, ಕೇಂದ್ರಕಛೇರಿ – ಹೊಸದಾಗಿ ಸೃಜನೆಯಾದ ಹುದ್ದೆ |
| 9 | ಸವಿತಾ ಬಿ.ಎನ್. | ಔಷಧ ಪರಿವೀಕ್ಷಕರು –3, ಸಹಾಯಕ ಔಷಧ ನಿಯಂತ್ರಕರ ಕಛೇರಿ, ಧಾರವಾಡ ವೃತ್ತ, ಹುಬ್ಬಳ್ಳಿ – ಹೊಸದಾಗಿ ಸೃಜನೆಯಾದ ಹುದ್ದೆ |

| ಕ್ರಮ ಸಂಖ್ಯೆ | ಔಷಧ ಪರಿವೀಕ್ಷಕರ ಹೆಸರು ಶ್ರೀ / ಶ್ರೀಮತಿ | ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾದ ಕಛೇರಿ ಹಾಗೂ ಹುದ್ದೆ |
|---|---|---|
| 10 | ಚಂದ್ರಪ್ರಭಾ ಕೆ. | ಔಷಧ ಪರಿವೀಕ್ಷಕರು –2, ತುಮಕೂರು ವೃತ್ತ, ಉಪ ಔಷಧ ನಿಯಂತ್ರಕರ ಪ್ರಾದೇಶಿಕ ಕಛೇರಿ, ತುಮಕೂರು – ಹೊಸದಾಗಿ ಸೃಜನೆಯಾದ ಹುದ್ದೆ |

ಮೇಲ್ಕಾಣಿಸಿದ ಅಧಿಕಾರಿಗಳನ್ನು ದಿನಾಂಕ: 06.12.2014ರ ಅಪರಾಹ್ನದಂದು ಕೇಂದ್ರ ಕಛೇರಿಯಲ್ಲಿನ ತರಬೇತಿ ಅವಧಿಯಿಂದ ಬಿಡುಗಡೆಗೊಳಿಸಲಾಗಿದೆ.

**PR. 1090** — **ರಘುರಾಮ ಭಂಡಾರಿ**

**SC. 50** — **ಔಷಧ ನಿಯಂತ್ರಕರು**

## ಔಷಧ ನಿಯಂತ್ರಣ ಇಲಾಖೆ

**ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560 001.**

**ಕಛೇರಿ ಆದೇಶ ಸಂಖ್ಯೆ: ಔನಿಇ/97/ಸಿಬ್ಬಂದಿ/2014–15, ದಿನಾಂಕ: 08.12.2014.**

**ವಿಷಯ:** ತರಬೇತಿಯಿಂದ ಬಿಡುಗಡೆ ಹೊಂದಿದ ಔಷಧ ಪರಿವೀಕ್ಷಕರು ಹುದ್ದೆಯ ಪ್ರಭಾರವನ್ನು ವಹಿಸಿಕೊಳ್ಳುವ ಬಗ್ಗೆ.

**ಉಲ್ಲೇಖ:** ಅಧಿಕೃತ ಜ್ಞಾಪನ ಸಂಖ್ಯೆ: ಔನಿಇ/97/ಸಿಬ್ಬಂದಿ/2014–15, ದಿನಾಂಕ: 06.12.2014.

ಔಷಧ ಪರಿವೀಕ್ಷಕರ ಹುದ್ದೆಗೆ ನೇಮಕಾತಿ ಹೊಂದಿ ತರಬೇತಿ ಅವಧಿಯಲ್ಲಿದ್ದ ಅಧಿಕಾರಿಗಳನ್ನು ಉಲ್ಲೇಖಿತ ಆದೇಶದನ್ವಯ ಸ್ಥಳನಿಯುಕ್ತಿಗೊಳಿಸಲಾಗಿದೆ.

ಈ ಹಿನ್ನೆಲೆಯಲ್ಲಿ, ಕೇಂದ್ರ ಕಛೇರಿಗೆ ನಿಯುಕ್ತಿಗೊಂಡಿರುವ ಕೆಳಕಂಡ ಅಧಿಕಾರಿಗಳು ಕಲಂ (4)ರಲ್ಲಿ ನಮೂದಿಸಿದಂತೆ ಪ್ರಭಾರವನ್ನು ವಹಿಸಿಕೊಳ್ಳಲು ಮತ್ತು ವಹಿಸಿಕೊಡಲು ಆದೇಶಿಸಿದೆ.

| ಕ್ರ ಸಂ | ಅಧಿಕಾರಿಯ ಹೆಸರು ಶ್ರೀ / ಶ್ರೀಮತಿ | ಸ್ಥಳನಿಯುಕ್ತಿಗೊಂಡ ಕಛೇರಿ ಹಾಗೂ ಹುದ್ದೆ | ಪ್ರಭಾರ ವಹಿಸಿಕೊಡುವ ಹಾಗೂ ವಹಿಸಿಕೊಳ್ಳುವ ಬಗ್ಗೆ. |
|---|---|---|---|
| 1 | ನಂದಿನಿ ಎನ್. | ಔಷಧ ಪರಿವೀಕ್ಷಕರು– 1, ಕೇಂದ್ರ ಕಛೇರಿ – ಖಾಲಿ ಇರುವ ಹುದ್ದೆ. | ಸದರಿ ಹುದ್ದೆಯನ್ನು ಅಧಿಕ ಪ್ರಭಾರದ ಮೇರೆಗೆ ನಿರ್ವಹಿಸುತ್ತಿರುವ ಶ್ರೀಮತಿ ನಮ್ರತಾ ಹಳ್ಳೂರ, ಔಷಧ ಪರಿವೀಕ್ಷಕರು–8, ಕೇಂದ್ರ ಕಛೇರಿರವರಿಂದ ಪ್ರಭಾರವನ್ನು ವಹಿಸಿಕೊಳ್ಳುವುದು. |
| 2 | ನೇಹಾ ಮುರ್ಗಿ | ಔಷಧ ಪರಿವೀಕ್ಷಕರು –2, ಕೇಂದ್ರ ಕಛೇರಿ – ಖಾಲಿ ಇರುವ ಹುದ್ದೆ. | ಸದರಿ ಹುದ್ದೆಯನ್ನು ಅಧಿಕ ಪ್ರಭಾರದ ಮೇರೆಗೆ ನಿರ್ವಹಿಸುತ್ತಿರುವ ಶ್ರೀ ಪಿ. ರಮೇಶ್, ಸಹಾಯಕ ಔಷಧ ನಿಯಂತ್ರಕರು–2, ಕೇಂದ್ರ ಕಛೇರಿರವರಿಂದ ಪ್ರಭಾರವನ್ನು ವಹಿಸಿಕೊಳ್ಳುವುದು. |
| 3 | ಉದಯ್‌ಕಿಶೋರ್ ಪಿ. | ಔಷಧ ಪರಿವೀಕ್ಷಕರು –3, ಕೇಂದ್ರ ಕಛೇರಿ – ಖಾಲಿ ಇರುವ ಹುದ್ದೆ. | ಸದರಿ ಹುದ್ದೆಯನ್ನು ಅಧಿಕ ಪ್ರಭಾರದ ಮೇರೆಗೆ ನಿರ್ವಹಿಸುತ್ತಿರುವ ಶ್ರೀಮತಿ ನಮ್ರತಾ ಹಳ್ಳೂರ, ಔಷಧ ಪರಿವೀಕ್ಷಕರು–8, ಕೇಂದ್ರ ಕಛೇರಿರವರಿಂದ ಪ್ರಭಾರವನ್ನು ವಹಿಸಿಕೊಳ್ಳುವುದು. |
| 4 | ದಯಾನಂದ ಕಾಡದೇವರ | ಔಷಧ ಪರಿವೀಕ್ಷಕರು –4, ಕೇಂದ್ರ ಕಛೇರಿ – ಖಾಲಿ ಇರುವ ಹುದ್ದೆ. | ಸದರಿ ಹುದ್ದೆಯನ್ನು ಅಧಿಕ ಪ್ರಭಾರದ ಮೇರೆಗೆ ನಿರ್ವಹಿಸುತ್ತಿರುವ ಶ್ರೀ ಉಮಾಕಾಂತ್ ಆರ್. ಪಾಟೀಲ್, ಸಹಾಯಕ ಔಷಧ ನಿಯಂತ್ರಕರು–3, ಕೇಂದ್ರ ಕಛೇರಿರವರಿಂದ ಪ್ರಭಾರವನ್ನು ವಹಿಸಿಕೊಳ್ಳುವುದು. |
| 5 | ಸುಹಾಸಿನಿ ಎನ್. | ಔಷಧ ಪರಿವೀಕ್ಷಕರು (ಗುಪ್ತವಾರ್ತೆ)–1, ರಾಜ್ಯ ಗುಪ್ತ ವಾರ್ತಾ ಶಾಖೆ, ಕೇಂದ್ರ ಕಛೇರಿ–ಖಾಲಿ ಇರುವ ಹುದ್ದೆ | ಸದರಿ ಹುದ್ದೆಯನ್ನು ಅಧಿಕ ಪ್ರಭಾರದ ಮೇರೆಗೆ ನಿರ್ವಹಿಸುತ್ತಿರುವ ಶ್ರೀಮತಿ ನಾಗರಾಣಿ ಶ್ವೇತಾ ವೀರಣ್ಣಾ, ಔಷಧ ಪರಿವೀಕ್ಷಕರು (ಗುಪ್ತವಾರ್ತೆ)–6, ರಾಜ್ಯ ಗುಪ್ತವಾರ್ತಾ ಶಾಖೆ, ಕೇಂದ್ರ ಕಛೇರಿರವರಿಂದ ಪ್ರಭಾರವನ್ನು ವಹಿಸಿಕೊಳ್ಳುವುದು. |
| 6 | ವಿಭಾ ಎಲ್. | ಔಷಧ ಪರಿವೀಕ್ಷಕರು –7, ಕೇಂದ್ರ ಕಛೇರಿ – ಹೊಸದಾಗಿ ಸೃಜನೆಯಾದ ಹುದ್ದೆ | ಸದರಿ ಹುದ್ದೆಯನ್ನು ಅಧಿಕ ಪ್ರಭಾರದ ಮೇರೆಗೆ ನಿರ್ವಹಿಸುತ್ತಿರುವ ಶ್ರೀಮತಿ ನಮ್ರತಾ ಹಳ್ಳೂರ, ಔಷಧ ಪರಿವೀಕ್ಷಕರು–8, ಕೇಂದ್ರ ಕಛೇರಿರವರಿಂದ ಪ್ರಭಾರವನ್ನು ವಹಿಸಿಕೊಳ್ಳುವುದು. |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಸಂಬಂಧಪಟ್ಟ ಅಧಿಕಾರಿಗಳು ತಮ್ಮ ಹುದ್ದೆಯ ಪ್ರಭಾರವನ್ನು ತಕ್ಷಣದಿಂದ ಜಾರಿಗೆ ಬರುವಂತೆ ವಹಿಸಿಕೊಡುವ ಹಾಗೂ ವಹಿಸಿಕೊಳ್ಳುವ ಪ್ರಕ್ರಿಯೆಯನ್ನು ಮುಗಿಸತಕ್ಕದ್ದು ಹಾಗೂ ತಮ್ಮ ಬಳಿ ಯಾವುದೇ ತನಿಖಾ ಕಡತಗಳನ್ನು, ವಶಪಡಿಸಿಕೊಂಡ ದಾಖಲೆ, ಮುದ್ದೆಮಾಲ್ ಇತ್ಯಾದಿ ಇದ್ದಲ್ಲಿ ಅವುಗಳನ್ನು 2–3 ದಿನಗಳಲ್ಲಿ ಎಲ್ಲಾ ವಿವರಗಳೊಂದಿಗೆ ಹಸ್ತಾಂತರಿಸಿ, ವರದಿ ಸಲ್ಲಿಸುವಂತೆ ಆದೇಶಿಸಿದೆ.

**PR. 1091** **ರಘುರಾಮ ಭಂಡಾರಿ**

**SC. 50** **ಔಷಧ ನಿಯಂತ್ರಕರು**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪ ನಿಬಂಧಕರು, ಮಿನಿ ವಿಧಾನ ಸೌಧ, ಕೊಠಡಿ ಸಂಖ್ಯೆ:305, 2 ನೇ ಮಹಡಿ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು.

**ವಿಷಯ:–** ಸ್ಥಗಿತಗೊಂಡಿರುವ ಶ್ರೀ ರಂಗನಾಥ ರೇಡಿಮೇಡ್ ಡ್ರೆಸ್ ಮೇಕರ್ಸ್ ಸಹಕಾರ ಸಂಘ ನಿ, ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:–** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪ ವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ .ಸನಿ32/ಸಮಾಪನೆ/39/2014–15. ದಿನಾಂಕ; 30–9–2014.

2) ಪ್ರಜಾಪ್ರಗತಿ ದಿನಪತ್ರಿಕೆ ಪ್ರಕಟಣೆ ದಿನಾಂಕ : 14–9–2014

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಶ್ರೀ ರಂಗನಾಥ ರೇಡಿಮೇಡ್ ಡ್ರೆಸ್ ಮೇಕರ್ಸ್ ಸಹಕಾರ ಸಂಘ ನಿ, ಚೇಳೂರು, ಗುಬ್ಬಿ ತಾಲ್ಲೂಕು, ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಎಆರ್‌ಟಿ–32/1230/1965–66 ದಿನಾಂಕ 29–01–1966ರಲ್ಲಿ ಸಹಾಯಕ ನಿಬಂಧಕರು ತುಮಕೂರು ಉಪವಿಭಾಗ ತುಮಕೂರು ಇವರಿಂದ ನೋಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು ಸುಮಾರು ವರ್ಷಗಳಿಂದ ಕಾರ್ಯಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ)ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪವಿಭಾಗ ತುಮಕೂರು ರವರು ಉಲ್ಲೇಖ(1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ ಆಡಳಿತ ಮಂಡಳಿ ಸದಸ್ಯರು ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ ಆಸಕ್ತಿ ತೋರಿರುವುದಿಲ್ಲ. ಸಂಘವು ಲೆಕ್ಕಪರಿಶೋದನೆ ಮಾಡಿಸಿರುವುದಿಲ್ಲ, ಸಂಘದ ವಾರ್ಷಿಕ ಮಹಾಸಭೆ ಮತ್ತು ಆಡಳಿತ ಮಂಡಲಿ ರಚನೆಗೆ ಕ್ರಮವಿಡದೇ ಸಂಘವು ಬೈಲಾ ಉದ್ದೇಶಗಳನ್ನು ಪೂರೈಸುವಲ್ಲಿ ವಿಫಲವಾಗಿರುವ ಕಾರಣ ಉಲ್ಲೇಖ(2)ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ. ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**:ಆದೇಶ:**

**ಸಂಖ್ಯೆ:ಡಿಆರ್‌ಟಿ:ಸಮಾಪನೆ:ಸಿಆರ್ 172 :2014–15, ದಿನಾಂಕ: 30–09–2014**

ಜಿ. ಪ್ರಕಾಶ್ ಕೆ.ಸಿ.ಎಸ್ ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/ಸಿಎಲ್‌ಎಂ/2008 ದಿನಾಂಕ : 27–5–2010 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಶ್ರೀ ರಂಗನಾಥ ರೇಡಿಮೇಡ್ ಡ್ರೆಸ್ ಮೇಕರ್ಸ್ ಸಹಕಾರ ಸಂಘ ನಿ, ಚೇಳೂರು, ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ, ಇದನ್ನು ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿಗಳು ಗುಬ್ಬಿ ತಾಲ್ಲೂಕು ಇವರನ್ನು ಋಣ ಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣ ಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತಃಖ್ತೆಯ ರೀತ್ಯಾ ಆಸ್ತಿ–ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ, ಅನುಮೋದನೆ ಪಡೆದು ಆದ್ಯತೆ ಮೇರೆಗೆ ವಿಲೇವಾರಿ ಮಾಡಿ, ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 30–09–2014 ರಂದು ನೀಡಿರುತ್ತೇನೆ.

**ಜಿ. ಪ್ರಕಾಶ್**

**PR. 883** ಸಹಕಾರ ಸಂಘಗಳ ಉಪ ನಿಬಂಧಕರು

**SC. 15** ತುಮಕೂರು ಜಿಲ್ಲೆ, ತುಮಕೂರು

*ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59

ಕೃಷಿ ಮತ್ತು ತೋಟಗಾರಿಕೆ ವಿಶ್ವವಿದ್ಯಾಲಯ, ಶಿವಮೊಗ್ಗ

## UNIVERSITY OF AGRICULTURAL AND HORTICULTURAL SCIENCES, SHIVAMOGGA

**NOTIFICATION**

**No. UAHS(S)/R/Quali. &Score-card(Officers Posts)/2906/2014-15 Dated: 25-11-2014**

**Sub:** Qualification and Score-card for Director of Education and Deans/Dean (PGS) / Director of Research/Director of Extension/ Registrar/Dean of Students Welfare and Librarian Posts under Direct Recruitment in UAHS, Shivamogga.

**Ref:** 1. Minutes of the Second Meeting of the Board of Management, UAHS, Shivamogga held on 04-09-2014, Part-B, Item No. 1, Vide No. UAHS(S)/R//2nd BOM-Min/2619(a)/2014-15, dated: 27-10-2014.

2. Approval of the Vice-Chancellor, UAHS, Shivamogga, dated: 25-11-2014.

In pursuance of the decision of the Meeting of the Board of Management cited at ref.(1) above, the qualification and score-cards for direct recruitment for selection of Director of Education are hereby notified as per **Annexure-A** and for Deans and Dean (PGS)/Director of Research/Director of Extension/ Registrar/Dean of Students Welfare as per **Annexure-A1** and Librarian as per **Annexure A2** in the University of Agricultural and Horticultural Sciences, Shivamogga which shall come into force with immediate effect. This Notification of qualification and score-card of above Officers posts are also available on University of Agricultural and Horticultural Sciences, Shivamogga, Website: **www.uahs.in.**

This is in accordance with the Modification of Qualification and Score-card pertaining to the Direct recruitment to the post of Dean/Director of Education/Director of Research/Director of Extension/Registrar and also Director of Students Welfare of UAS, Bangalore published in the Notification No. AO/RT/Quali. & Score-card (officer Posts)/2011-12, dated: 7-9-2011 of Administrative officer, UAS, Bangalore.

Regarding the Librarian post, the qualification part prescribed for the post will be in accordance with the notification issued from UAS, Bangalore [No. AO/RT/11/49/Current posts/librarian/2014-15, dated: 05-05-2014 of Administrative Officer, UAS(B)] while, the score card for the librarian post at UAS (B) is not available and as such the score card for librarian of UAS, Dharwad is considered (vide Notification No. R/Rectt/B-121/2007, dated: 13-12-2007 of Registrar, UAS, Dharwad).

By Order

**M.S. Ganesh Babu**

**Registrar**

**Annexure – A**

**QUALIFICATION AND SCORE CARD FOR THE RECRUITMENT OF OFFICERS POST AT UNIVERSITY OF AGRICULTURAL AND HORTICULTURAL SCIENCES, SHIVAMOGGA**

**I. Qualification and Scorecard for the direct recruitment of Director of Education, in the University of Agricultural and Horticultural Sciences, Shivamogga.**

**Qualifications:**

1. A Bachelor's degree in any discipline of Agriculture sciences from a recognized University.
2. A Master's degree in any discipline of Agriculture Sciences with at least 55% of marks (Annual system) and or CGPA of 3 out of 4 (Trimester system) and/or OGPA of 8 out of 10 (Semester system).
3. A Doctoral degree in any Agriculture discipline.
4. A total experience of 25 years of Teaching/Research/Extension/Administration in Universities/Colleges and other Institutions of higher education, out of which 12 years shall be in the cadre of Professor and minimum of 3 years experience as Dean / Director of Research / Registrar / Director of Extension at an Agricultural University/National level Institute.

**Score-card: Allotment of Marks:**

| SL NO. | Particulars | Marks allotted for main items Director of Education |
|---|---|---|
| 1. | Academic Qualifications. | 11 |
| 2. | Academic/Administrative Experience (in the cadre of Professor & above). | 20 |
| 3. | Externally funded projects operated (in the cadre of Professor & above). | 10 |
| 4. | Organizing Symposium/Seminars/ Summer Institute/Winter Institute/ Refresher Courses/Workshop (Course Director) / Training Programmes/ Krishimela/ Extension Field days/Exhibitions (Chairman of the committee) (in the cadre of Professor & above). | 05 |

